KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೧೧, ೨೦೦೯ (ಜ್ಯೇಷ್ಠ ೨೧, ಶಕ ವರ್ಷ ೧೯೩೧) | ಸಂಚಿಕೆ ೨೪ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ಅಧಿಸೂಚನೆ ಸಂಖ್ಯೆ:ಗ್ರಾಅಪ/13/ಸಮನ್ವಯ/2009, ಬೆಂಗಳೂರು, ದಿನಾಂಕ:24ನೇ ಏಪ್ರಿಲ್ 2009**

ಮಾಹಿತಿ ಹಕ್ಕು ಅಧಿನಿಯಮ 2005 (2005ರ ಕೇಂದ್ರ ಕಾಯ್ದೆ ಸಂಖ್ಯೆ:22)ರಡಿಯಲ್ಲಿ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಗುರುತಿಸಿ, ಸದರಿ ಅಧಿನಿಯಮದ ಕಲಂ 5(1) ಹಾಗೂ ಕಲಂ 5(2)ರಡಿಯಲ್ಲಿ ಕ್ರಮವಾಗಿ ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯೆಂದು ನೇಮಕ ಮಾಡಿ ದಿನಾಂಕ:25–8–2005ರಂದು ಹೊರಡಿಸಿದ್ದ ಅಧಿಸೂಚನೆ ಸಂಖ್ಯೆ: ಗ್ರಾಅಪ 324 ಕೆಎಸ್ಎಸ್ 2005ನ್ನು ಕಾಲೋಚಿತಗೊಳಿಸಿ(update) ಈ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ.

| ಕ್ರ. ಸಂ | ವಿಭಾಗ | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |
|---|---|---|---|
| 1) | ಆಡಳಿತ ವಿಭಾಗ | ಸರ್ಕಾರದ ಉಪಕಾರ್ಯದರ್ಶಿ (ಆಡಳಿತ) , ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ. | 1)ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ). 2)ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು- ಬಿ ಮತ್ತು ಸಿ). |
| 2) | ಆಂತರಿಕ ಆರ್ಥಿಕ ಸಲಹೆಗಾರರ ವಿಭಾಗ | ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | 1)ಶಾಖಾಧಿಕಾರಿ 2)ಲೆಕ್ಕಾಧಿಕಾರಿ |
| 3) | ಸ್ವ ಉದ್ಯೋಗಕಾರ್ಯಕ್ರಮ ವಿಭಾಗ | ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | ಜಂಟಿ ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮ, |
| 4) | ಮೂಲಭೂತ ಸೌಲಭ್ಯಗಳು | ನಿರ್ದೇಶಕರು, ಮೂಲಭೂತ ಸೌಲಭ್ಯಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | 1)ಉಪನಿರ್ದೇಶಕರು (ಗ್ರಾಮೀಣ ರಸ್ತೆಗಳು) 2)ಸರ್ಕಾರದ ಅಧೀನ ಕಾರ್ಯದರ್ಶಿ (ಗ್ರಾಮೀಣ ನೀರು ಸರಬರಾಜು) |

| | | | |
|---|---|---|---|
| 5) | ಪಂಚಾಯತ್ ರಾಜ್ ವಿಭಾಗ | ನಿರ್ದೇಶಕರು (ಪಂ.ರಾಜ್),. ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | 1)ಸರ್ಕಾರದ ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್)<br>2)ಶಾಖಾಧಿಕಾರಿ (ಗ್ರಾಮ ಪಂಚಾಯಿತಿ) |
| 6) | ಯೋಜನಾ ಉಸ್ತುವಾರಿ ಹಾಗೂ ಮಾಹಿತಿ ವಿಭಾಗ | ನಿರ್ದೇಶಕರು, ಯೋಜನಾ ಉಸ್ತುವಾರಿ ಹಾಗೂ ಮಾಹಿತಿ ಯೋಜನಾ ಉಸ್ತುವಾರಿ ಹಾಗೂ ಮಾಹಿತಿ ವಿಭಾಗ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | 1)ಉಪನಿರ್ದೇಶಕರು, ಪಿಎಂಐ ವಿಭಾಗ.<br>2) ಮುಖ್ಯ ಸಂಪಾದಕರು 'ಕರ್ನಾಟಕ ವಿಕಾಸ' |
| 7) | ಗ್ರಾಮ ಸ್ವರಾಜ್ ಯೋಜನೆ ವಿಭಾಗ | ನಿರ್ದೇಶಕರು, ಗ್ರಾಮ ಸ್ವರಾಜ್ ಯೋಜನೆ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | ಅಪರ ಮುಖ್ಯಸ್ಥರು ಕಾರ್ಯಾಚರಣೆ ಗ್ರಾಮ ಸ್ವರಾಜ್ ಯೋಜನೆ |
| 8) | ಸುವರ್ಣ ಗ್ರಾಮೋದಯ ವಿಭಾಗ | ನಿರ್ದೇಶಕರು, ಸುವರ್ಣ ಗ್ರಾಮೋದಯ ವಿಭಾಗ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | ಯೋಜನಾ ನಿರ್ದೇಶಕರು, ಸುವರ್ಣ ಗ್ರಾಮೋದಯ ವಿಭಾಗ |
| 9) | ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನಾ ವಿಭಾಗ | ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನಾ ವಿಭಾಗ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | 1)ಜಂಟಿ ನಿರ್ದೇಶಕರು<br>2)ಜಂಟಿ ನಿರ್ದೇಶಕರು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನಾ ವಿಭಾಗ |

2005ರ ಮಾಹಿತಿ ಹಕ್ಕು ಅಧಿನಿಯಮದ ಸೆಕ್ಷನ್ 19(1) ರ ಅಡಿಯಲ್ಲಿ ಸಾರ್ವಜನಿಕರು ಮೇಲ್ಮನವಿಯನ್ನು ಸಲ್ಲಿಸಲು ಅನುವಾಗುವಂತೆ ಸರ್ಕಾರದ ಕಾರ್ಯದರ್ಶಿ, (ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರನ್ನು ಮೇಲ್ಮನವಿ ಪ್ರಾಧಿಕಾರವೆಂದು ನೇಮಕ ಮಾಡಲಾಗಿದೆ.

**ಪಿ. ರವಿಕುಮಾರ್**
ಸರ್ಕಾರದ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

ಪಿ.ಆರ್. 296

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 23 ಎಫ್‌ಎಫ್ 2006, ಬೆಂಗಳೂರು, ದಿನಾಂಕ: 23ನೇ ಜನವರಿ 2007.**

1963ನೇ ಕರ್ನಾಟಕ ಅರಣ್ಯ ಅಧಿನಿಯಮ (1964ನೇ ಕರ್ನಾಟಕ ಅರಣ್ಯ ಕಾಯ್ದೆ ಕಲಂ–5ರ) 17ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಕರ್ನಾಟಕ ಸರ್ಕಾರದ ಉಧಾರ ಭಾವನೆಯ ಮೇರೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಎಫ್‌ಡಿ 39 ಎಫ್‌ಎಫ್ 80 ದಿನಾಂಕ:29.4.80ರ ಪ್ರಕಾರ ಈ ಕೆಳಗೆ ಅನುಸೂಚಿಯಲ್ಲಿ ನಮೂದಿಸಿರುವ ಜಮೀನುಗಳನ್ನು 22.1.2007ನೇ ದಿನಾಂಕದಿಂದ ಅನುಸೂಚಿಯಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು ಮೀಸಲು ಅರಣ್ಯವೆಂದು ಕರ್ನಾಟಕ ಸರ್ಕಾರವು ಕಾಯ್ದಿರಿಸಿದೆ ಎಂದು ಈ ಮೂಲಕ ಘೋಷಿಸಲಾಗಿದೆ.

***ಅನುಸೂಚಿ***

1) ಜಿಲ್ಲೆ ಹೆಸರು : ಶಿವಮೊಗ್ಗ
2) ತಾಲ್ಲೂಕು ಹೆಸರು : ಭದ್ರಾವತಿ
3) ಹೋಬಳಿಯ ಹೆಸರು : ಕೊದಲಗೆರೆ
4) ಗ್ರಾಮದ ಹೆಸರು : ಬಸಲೀಕಟ್ಟೆ
5) ಸರ್ವೆ ನಂ. : 24
6) ವಿಸ್ತೀರ್ಣ : 56.00 ಎ.ಗುಂ 22.67 ಹೆಕ್ಟೇರ್
7) ಬ್ಲಾಕಿನ ಹೆಸರು : ಬಸಲೀಕಟ್ಟೆ ಮೀಸಲು ಅರಣ್ಯ

**ಗಡಿ ವಿವರಣೆ**

**ಉತ್ತರಕ್ಕೆ :–** ಸರ್ವೆ ರೇಖೆಯು ಸ್ಥಾನಸಂಖ್ಯೆ 6 ರಿಂದ ಪ್ರಾರಂಭಿಸುತ್ತದೆ. ಇದು ನಾಲೆಯ ಬಲ ದಂಡೆಯಲ್ಲಿ ಮತ್ತು ರಸ್ತೆ ಸೇತುವೆ ಮತ್ತು ನಾಲೆಯ ದಂಡೆಗಳು ಸೇರುವಲ್ಲಿ ಸ್ಥಿರವಾಗಿದೆ. ರೇಖೆಯು ಸ್ಥಾನಸಂಖ್ಯೆ 6ರಿಂದ 7ಕ್ಕೆ ಪೂರ್ವಾಭಿಮುಖವಾಗಿ ಸರ್ವೆ ನಂ 24ರಲ್ಲಿ 33ಸರಪಳಿ ದೂರ ಗಾಡಿ ದಾರಿಯ ಮೇಲೆ ಸಾಗುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 7 ರಿಂದ 8ಕ್ಕೆ ಉತ್ತರಾಭಿಮುಖವಾಗಿ 41 ಸರಪಳಿ ದೂರ ಸಾಗುವುದು

ಸ್ಥಾನದಿಂದ ಸ್ಥಾನಕ್ಕೆ ಇರುವ ಬೇರಿಂಗ್ ಮತ್ತು ದೂರ ಈ ಕೆಳಕಂಡಂತೆ ಇದೆ

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (33 ಸರಪಳಿ) |
|---|---|---|---|
| 6 | 7 | 103.30 | 33.00 |
| 7 | 8 | 3.30 | 41.00 |

**ಪೂರ್ವ :–**ಗಡಿ ರೇಖೆಯು ಸ್ಥಾನಸಂಖ್ಯೆ 8 ರಿಂದ 1ಕ್ಕೆ ಪ್ರಾರಂಭವಾಗಿ ದಕ್ಷಿಣ ಮತ್ತು ಆಗ್ನೇಯ ದಿಕ್ಕುಗಳ ನಡುವೆ ಸರ್ವೆ ನಂ 24 ಮತ್ತು 8.16 ರ ಸಾಮಾನ್ಯ ಗಡಿಯ ಮೇಲೆ 107 ಸರಪಳಿ ದೂರ ಸಾಗಿ ಮತ್ತು ನಂ 24, 8, 16, ಮತ್ತು ನೇರಲಕೆರೆ ಗ್ರಾಮದ ಗಡಿಗಳು ಸಂಧಿಸುವ ಕೂಡುಬಾಂದನ್ನು ಸೇರುವುದು.

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (33 ಸರಪಳಿ) |
|---|---|---|---|
| 8 | 1 | 153.00 | 107.00 |

**ದಕ್ಷಿಣ:** ರೇಖೆಯು ಸ್ಥಾನಸಂಖ್ಯೆ 1 ರಿಂದ 2ಕ್ಕೆ ಪಶ್ಚಿಮಾಭಿಮುಖವಾಗಿ ಸರ್ವೆ ನಂ 24 ಮತ್ತು ನೇರಲೇಕೆರೆ ಗ್ರಾಮದ ಸಾಮಾನ್ಯ ಗಡಿಯ ಮೇಲೆ 62 ಸರಪಳಿ ದೂರ ಸಾಗಿ ಭದ್ರಾ ನಾಲೆಯನ್ನು ಮುಟ್ಟುತ್ತದೆ.

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (33 ಸರಪಳಿ) |
|---|---|---|---|
| 1 | 2 | 261 | 62 |

**ಪಶ್ಚಿಮ:** ರೇಖೆಯು ಸ್ಥಾನಸಂಖ್ಯೆ 2 ರಿಂದ 3 ಕ್ಕೆ ಉತ್ತರಾಭಿಮುಖವಾಗಿ ಭದ್ರಾ ನಾಲೆಯ ಮೇಲೆ 17 ಸರಪಳಿ ದೂರ ಸಾಗಿ ಪುನಃ ರೇಖೆಯು ಸ್ಥಾನಸಂಖ್ಯೆ 3 ರಿಂದ 5ಕ್ಕೆ ಸ್ಥಾನಸಂಖ್ಯೆ 4ರ ಮೂಲಕ ವಾಯುವ್ಯಾಭಿಮುಖವಾಗಿ 52 ಸರಪಳಿ ದೂರ ಸಾಗುತ್ತದೆ. ನಂತರ ರೇಖೆಯು ಮುಂದುವರಿದು ಸ್ಥಾನಸಂಖ್ಯೆ 5 ರಿಂದ 6ಕ್ಕೆ ಉತ್ತರಾಭಿಮುಖವಾಗಿ ಗಾಡಿ ರಸ್ತೆಯನ್ನು ದಾಟಿ ಪ್ರಾರಂಭದ ಸ್ಥಾನಕ್ಕೆ 11 ಸರಪಳಿ ದೂರದಲ್ಲಿ ಸೇರುವುದು.

ಸ್ಥಾನದಿಂದ ಸ್ಥಾನಕ್ಕೆ ಇರುವ ಬೇರಿಂಗ್ ಮತ್ತು ದೂರ ಈ ಕೆಳಕಂಡಂತೆ ಇದೆ

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (33 ಸರಪಳಿ) |
|---|---|---|---|
| 2 | 3 | 4.00 | 17.00 |
| 3 | 4 | 325.00 | 9.00 |
| 4 | 5 | 332.00 | 43.00 |
| 5 | 6 | 10.00 | 11.00 |

**ದಾರಿಯ ಹಕ್ಕುಗಳು**

ಗಾಡಿ ರಸ್ತೆಯು ಮೀಸಲು ಅರಣ್ಯ ಪ್ರದೇಶದಲ್ಲಿ ಹಾದು ಬಸಲೀಕಟ್ಟೆಯಿಂದ ಅರಣ್ಯ ಪ್ರದೇಶಕ್ಕೆ ಪೂರ್ವ ದಿಕ್ಕಿನಲ್ಲಿ ಭದ್ರಾ ನಾಲೆ ಸೇತುವೆಯ ಮೂಲಕ ಹಾದು ಹೋಗುತ್ತದೆ.

**ಇತರೆ ಸವಲತ್ತುಗಳು**

1) ಉಚಿತವಾಗಿ ಗ್ರಾಮಸ್ಥರು ತಮ್ಮ ಜಾನುವಾರುಗಳಿಗೆ ಹುಲ್ಲು ಮೇಯಿಸಬಹುದಾಗಿದೆ.
2) ಉಚಿತವಾಗಿ ಗ್ರಾಮಸ್ಥರು ಹಸಿರು ಎಲೆಗೊಬ್ಬರವನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.
3) ಉಚಿತವಾಗಿ ಗ್ರಾಮಸ್ಥರು ಒಣ ಉರುವಲು ಸೌದೆಗಳ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.
4) ಉಚಿತವಾಗಿ ಗ್ರಾಮಸ್ಥರು ಮುಳೀ ಹುಲ್ಲನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ ಜಯಲಕ್ಷ್ಮಿ**

ಪಿ.ಆರ್. 298

ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಅಪಜೀ 26 ಎಫ್‌ಎಎಫ್ 2006, ಬೆಂಗಳೂರು, ದಿನಾಂಕ: 19ನೇ ಜನವರಿ 2007.**

ಕರ್ನಾಟಕ ಅರಣ್ಯ ಕಾಯ್ದೆ ಕಲಂ 4(1)(ಎ)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಆನಂದಪುರಂ ಹೋಬಳಿ ಅನುಸೂಚಿಯಲ್ಲಿನ ಗ್ರಾಮದ ಸರಹದ್ದಿಗೆ ಒಳಪಟ್ಟ ಈ ಕೆಳಗೆ ಅನುಸೂಚಿಸಿದ ಪ್ರದೇಶವನ್ನು ಗಿಳಾಲುಗುಂಡಿ (ವಿಸ್ತರಣೆ) ಮೀಸಲು ಅರಣ್ಯ ಎಂದು ರಚಿಸಲು ಉದ್ದೇಶಿಸಿದೆ.

***ಅನುಸೂಚಿ***

1) ಜಿಲ್ಲೆ : ಶಿವಮೊಗ್ಗ
2) ತಾಲ್ಲೂಕು : ಸಾಗರ
3) ಹೋಬಳಿ : ಆನಂದಪುರಂ
4) ಅರಣ್ಯದ ಹೆಸರು : ಗಿಳಾಲುಗುಂಡಿ (ವಿಸ್ತರಣೆ) ಮೀಸಲು ಅರಣ್ಯ

| ಗ್ರಾಮ | ಸರ್ವೆನಂ | ಅಧಿಸೂಚನೆಗೆ ಒಳಪಟ್ಟ ವಿಸ್ತೀರ್ಣ | | ಷರಾ |
|---|---|---|---|---|
| | | ಎ.ಗುಂಟೆ | ಹೆಕ್ಟೇರ್ | |
| ಕೆರೆಹಿತ್ತಲು | 29(ಭಾಗ) | 16–00 | 6.47 | |
| | ಒಟ್ಟು | 16–00 | 6.47 | |

2) ಮೇಲಿನ ಅನುಸೂಚಿತ ಪ್ರದೇಶಗಳ ಸಂಕ್ಷಿಪ್ತ ಸರಹದ್ದುಗಳು ಈ ಕೆಳಗಿನಂತಿದೆ.

ಅ) ಉತ್ತರಕ್ಕೆ: ಕೆರೆಹಿತ್ತಲು ಗ್ರಾಮ ಸ.ನಂ 29ರ ಉಳಿದ ಭಾಗ

ಆ) ಪೂರ್ವಕ್ಕೆ: ಗಿಳಾಲುಗುಂಡಿ ಮೀಸಲು ಅರಣ್ಯ

ಇ) ದಕ್ಷಿಣಕ್ಕೆ: ಲಕ್ಕವಳ್ಳಿ ಗ್ರಾಮದ ಗಡಿ

ಈ) ಪಶ್ಚಿಮಕ್ಕೆ: ಕೆರೆಹಿತ್ತಲು ಗ್ರಾಮ ಸ.ನಂ. 29ರ ಉಳಿದ ಭಾಗ

ಸವಿವರವಾದ ಸರಹದ್ದು ವಿವರಣೆ ಅನುಬಂಧದಂತೆ ಇರುತ್ತದೆ.

3) ಶಿವಮೊಗ್ಗ ಜಿಲ್ಲೆಯ ಅರಣ್ಯ ವ್ಯವಸ್ಥಾಪನಾಧಿಕಾರಿಗಳು, ಈ ಪ್ರಕರಣಕ್ಕೆ ಕಲಂ (4)(1) (ಸಿ)ಯಂತೆ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಇವರು ಮೇಲಿನ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದೆನ್ನಲಾದ ಹಕ್ಕುಬಾಧ್ಯತೆಗಳನ್ನು ತೀರ್ಮಾನಿಸುವರು, ಸಾಗರ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಈ ವಿಚಾರಣೆಯಲ್ಲಿ ಸರ್ಕಾರವನ್ನು ಪ್ರತಿಪಾದಿಸುವರು.

4) ಅರಣ್ಯ ವ್ಯವಸ್ಥಾಪನಾಧಿಕಾರಿಯವರ ತೀರ್ಮಾನದ ಮೇಲಿನ ಅಹವಾಲುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ (16)ರಂತೆ ಇತ್ಯರ್ಥ ಮಾಡಿಕೊಳ್ಳಬಹುದಾಗಿದೆ.

## ಅನುಬಂಧ

### ಸವಿವರವಾದ ಸರಹದ್ದು ವಿವರಣೆ

**ಉತ್ತರಕ್ಕೆ** : ಪ್ರಾರಂಭಿಕ ಸ್ಥಾನವು ಕೆರೆಹಿತ್ತಲು ಗ್ರಾಮ ಸ.ನಂ. 28ರ ಆಗ್ನೇಯ ಮೂಲೆಯಿಂದ ವಾಯುವ್ಯಾಭಿಮುಖವಾಗಿ 7.5 ಸರಪಳಿ ಮತ್ತು ಇದೆ ಸ.ನಂ. 82ರ ದಕ್ಷಿಣದ ಗಡಿಯಲ್ಲಿರುವ ಜಂಟಿ ಬಾಂದುವಿನಿಂದ ಆಗ್ನೇಯಾಭಿಮುಖವಾಗಿ 7.0 ಸರಪಳಿಗಳ ದೂರಗಳನ್ನು ಇದೇ ಸ.ನಂ. 295 ಮೂಲಕ ಹಾದು ಈ ಎರಡು ಅಂತರಗಳು ಸಂಧಿಸುವ ಬಿಂದುವಿನಲ್ಲಿ ಸಂಧಿಸುತ್ತದೆ; ಪುನಃ ಇಲ್ಲಿಂದ ಸೀಮಾರೇಖೆಯು ಪೂರ್ವಾಭಿಮುಖವಾಗಿ 11.57 ಸರಪಳಿಗಳ ದೂರವನ್ನು ಸ.ನಂ. 29ರ ಮುಖಾಂತರ ಚಲಿಸಿ ಗಿಳಾಲುಗುಂಡಿ ಮೀಸಲು ಅರಣ್ಯ ಗಡಿಯನ್ನು ಸಂಧಿಸುತ್ತದೆ.

**ಅಳತೆ ತಪಶೀಲುಗಳು**

| ಸ್ಥಾನದಿಂದ | ಸ್ಥಾನಕ್ಕೆ | ಚೈನೇಜ್ (66) | ಬೇರಿಂಗ್ ಡಿಗ್ರಿಗಳಲ್ಲಿ |
|---|---|---|---|
| 22 | 23 | 3.20 | 087–00 |
| 23 | 01 | 0.57 | 085–00 |
| 01 | 02 | 2.00 | 095–00 |
| 02 | 03 | 2.74 | 095–00 |
| 03 | 04 | 1.06 | 095–00 |
| 04 | 05 | 2.00 | 095–00 |

**ಪೂರ್ವಕ್ಕೆ:** ಪುನಃ ಇಲ್ಲಿಂದ ನೈರುತ್ಯಾಭಿಮುಖವಾಗಿ 19.98 ಸರಪಳಿಗಳ ದೂರವನ್ನು ಗಿಳಾಲುಗುಂಡಿ ಮೀಸಲು ಅರಣ್ಯ ಗಡಿಯಲ್ಲೇ ಚಲಿಸಿ ಗ್ರಾಮ ಲಕ್ಕವಳ್ಳಿ ಗಡಿಯಲ್ಲಿ ಸಂಧಿಸುತ್ತದೆ.

| ಸ್ಥಾನದಿಂದ | ಸ್ಥಾನಕ್ಕೆ | ಚೈನೇಜ್ (66) | ಬೇರಿಂಗ್ ಡಿಗ್ರಿಗಳಲ್ಲಿ |
|---|---|---|---|
| 05 | 06 | 4.00 | 230–00 |
| 06 | 07 | 2.20 | 230–00 |
| 7 | 8 | 2.20 | 220–00 |
| 8 | 9 | 2.00 | 220–00 |
| 09 | 10 | 2.20 | 220–00 |
| 10 | 11 | 1.25 | 215–00 |
| 11 | 12 | 1.28 | 215–00 |
| 12 | 13 | 1.50 | 221–00 |
| 13 | 14 | 1.00 | 230–00 |
| 14 | 15 | 2.25 | 230–00 |

**ದಕ್ಷಿಣಕ್ಕೆ:** ಪುನಃ ಇಲ್ಲಿಂದ ನೈರುತ್ಯಾಭಿಮುಖವಾಗಿ 8.10 ಸರಪಳಿಗಳ ದೂರವನ್ನು ಲಕ್ಕವಳ್ಳಿ ಗ್ರಾಮದ ಗಡಿಯನ್ನೇ ಅನುಸರಿಸುತ್ತಾ ಸ.ನಂ. 8ರ ಉತ್ತರ ಮೂಲೆಯಿಂದ ಈಶಾನ್ಯಾಭಿಮುಖವಾಗಿ ಇದೇ ಗ್ರಾಮದ ಗಡಿಯಲ್ಲಿ 10.00 ಸರಪಳಿಗಳ ಅಂತರದಿಂದ ಸೇರುವ ಬಾಂದುವಿನಲ್ಲಿ ಸಂಧಿಸುತ್ತದೆ.

**ಅಳತೆ ತಪಶೀಲುಗಳು**

| ಸ್ಥಾನದಿಂದ | ಸ್ಥಾನಕ್ಕೆ | ಚೈನೇಜ್ (66) | ಬೇರಿಂಗ್ ಡಿಗ್ರಿಗಳಲ್ಲಿ |
|---|---|---|---|
| 15 | 16 | 2.50 | 253–00 |
| 16 | 17 | 2.50 | 253–00 |
| 17 | 18 | 3.10 | 253–00 |

**ಪಶ್ಚಿಮಕ್ಕೆ:** ಪುನಃ ಇಲ್ಲಿಂದ ವಾಯುವ್ಯಾಭಿಮುಖವಾಗಿ ಕೆರೆಹಿತ್ತುಲು ಗ್ರಾಮ ಸ.ನಂ. 29ರ ಮುಖಾಂತರ 20 ದೂರ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಅಳತೆ ತಪಶೀಲುಗಳು**

| ಸ್ಥಾನದಿಂದ | ಸ್ಥಾನಕ್ಕೆ | ಚೈನೇಜ್ (66) | ಬೇರಿಂಗ್ ಡಿಗ್ರಿಗಳಲ್ಲಿ |
|---|---|---|---|
| 18 | 19 | 5.00 | 007–00 |
| 19 | 20 | 5.00 | 007–00 |
| 20 | 21 | 5.00 | 007–00 |
| 21 | 22 | 5.00 | 007–00 |

ಹಕ್ಕು ದಾರಿ, ಸವಲತ್ತುಗಳು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ ಜಯಲಕ್ಷ್ಮಿ**

ಪಿ.ಆರ್. 299

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಅಧಿಸೂಚನೆ ಸಂಖ್ಯೆ: ಅಪಜೀ 28 ಎಫ್‌ಎಎಫ್ 2006, ಬೆಂಗಳೂರು, ದಿನಾಂಕ: 19ನೇ ಜನವರಿ 2007.**

ಕರ್ನಾಟಕ ಅರಣ್ಯ ಕಾಯ್ದೆ ಕಲಂ 4(1)(ಎ)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು, ಕುಪ್ಪಗದ್ದೆ ಹೋಬಳಿ ಅನುಸೂಚಿಯಲ್ಲಿನ ಗ್ರಾಮದ ಸರಹದ್ದಿಗೆ ಒಳಪಟ್ಟ ಈ ಕೆಳಗೆ ಅನುಸೂಚಿಸಿದ ಪ್ರದೇಶವನ್ನು ಬೆಟ್ಟದಕುರ್ಲಿ ಮೀಸಲು ಅರಣ್ಯ (ವಿಸ್ತರಣೆ) ಎಂದು ರಚಿಸಲು ಉದ್ದೇಶಿಸಿದೆ.

***ಅನುಸೂಚಿ***

1) ಜಿಲ್ಲೆ : ಶಿವಮೊಗ್ಗ

2) ತಾಲ್ಲೂಕು : ಸೊರಬ

3) ಹೋಬಳಿ : ಕುಪ್ಪಗದ್ದೆ

4) ಅರಣ್ಯದ ಹೆಸರು : ಬೆಟ್ಟದಕುರ್ಲಿ ಮೀಸಲು ಅರಣ್ಯ (ವಿಸ್ತರಣೆ)

| ಗ್ರಾಮ | ಸರ್ವೆನಂ | ಅಧಿಸೂಚನೆಗೆ ಒಳಪಟ್ಟ ವಿಸ್ತೀರ್ಣ | | ಷರಾ |
|---|---|---|---|---|
| | | ಎ.ಗುಂಟೆ | ಹೆಕ್ಟೇರ್ | |
| ಮತ್ತಿಘಟ್ಟ | 6 | 26–23 | 10.75 | |

2) ಮೇಲಿನ ಅನುಸೂಚಿತ ಪ್ರದೇಶಗಳ ಸಂಕ್ಷಿಪ್ತ ಸರಹದ್ದುಗಳು ಈ ಕೆಳಗಿನಂತಿದೆ.

ಅ) ಉತ್ತರಕ್ಕೆ:

ಆ) ಪೂರ್ವಕ್ಕೆ: ಬೆಟ್ಟದ ಕುರ್ಲಿ ಸ್ಟೇಟ್ ಫಾರೆಸ್ಟ್

ಇ) ದಕ್ಷಿಣಕ್ಕೆ:

ಈ) ಪಶ್ಚಿಮಕ್ಕೆ: ಮತ್ತಿಘಟ್ಟ ಸ.ನಂ. 1,4 (ಕೆರೆ) 5 ಸ.ನಂ. 5ಉತ್ತರಕ್ಕೆ ಹೊಂದಿಕೊಡ ಕೆರೆಯ ಪೂರ್ವದ ಗಡಿ

ಸವಿವರವಾದ ಸರಹದ್ದು ವಿವರಣೆ ಅನುಬಂಧದಂತೆ ಇರುತ್ತದೆ.

3) ಶಿವಮೊಗ್ಗ ಜಿಲ್ಲೆಯ ಅರಣ್ಯ ವ್ಯವಸ್ಥಾಪನಾಧಿಕಾರಿಗಳು, ಈ ಪ್ರಕರಣಕ್ಕೆ ಕಲಂ (4)(1) (ಸಿ)ಯಂತೆ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಇವರು ಮೇಲಿನ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದೆನ್ನಲಾದ ಹಕ್ಕುಬಾಧ್ಯತೆಗಳನ್ನು ತೀರ್ಮಾನಿಸುವರು, ಸಾಗರ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಈ ವಿಚಾರಣೆಯಲ್ಲಿ ಸರ್ಕಾರವನ್ನು ಪ್ರತಿಪಾದಿಸುವರು.

4) ಅರಣ್ಯ ವ್ಯವಸ್ಥಾಪನಾಧಿಕಾರಿಯವರ ತೀರ್ಮಾನದ ಮೇಲಿನ ಅಹವಾಲುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ (16)ರಂತೆ ಇತ್ಯರ್ಥ ಮಾಡಿಕೊಳ್ಳಬಹುದಾಗಿದೆ.

**ಅನುಬಂಧ**

**ಸವಿವರವಾದ ಸರಹದ್ದು ವಿವರಣೆ**

**ಉತ್ತರಕ್ಕೆ** : ಪ್ರಾರಂಭಿಕ ಸ್ಥಾನವು ಮತ್ತಿಘಟ್ಟ ಗ್ರಾಮದ ಸ.ನಂ. 5ರ ಉತ್ತರಗಡಿಗೆ ಹೊಂದಿಕೊಂಡ ಕೆರೆಯ ಈಶಾನ್ಯಾ ಮೂಲೆಯ ಸ್ಥಾನ ಸಂಖ್ಯೆ 1ರಲ್ಲಿ ಸ್ಥಿರವಾಗಿರುತ್ತದೆ ಇಲ್ಲಿಂದ ಸೀಮಾರೇಖೆಯು ಪೂರ್ವಾಭಿಮುಖವಾಗಿ 8 ಸರಪಳಿಗಳ ದೂರವನ್ನು ಬೆಟ್ಟದ ಕುರ್ಲಿ ಮೀಸಲು ಅರಣ್ಯ ಗಡಿಯನ್ನೇ ಅನುಸರಿಸುತ್ತಾ ಸ್ಥಾನ ಸಂಖ್ಯೆ (2)ನ್ನು ಇದೇ ಮೀಸಲು ಅರಣ್ಯ ಗಡಿಯಲ್ಲಿ ಸೇರುತ್ತದೆ.

**ಅಳತೆ ತಪಶೀಲುಗಳು**

| ಸ್ಥಾನದಿಂದ | ಸ್ಥಾನಕ್ಕೆ | ಚೈನೇಜ್ ($66^0$) | ಬೇರಿಂಗ್ ಡಿಗ್ರಿಗಳಲ್ಲಿ |
|---|---|---|---|
| 1 | 2 | 8.00 | 106–00 |

**ಪೂರ್ವಕ್ಕೆ:** ಪುನಃ ಇಲ್ಲಿಂದ ಕ್ರಮವಾಗಿ ದಕ್ಷಿಣ, ಆಗ್ನೇಯ ದಿಕ್ಕುಗಳಲ್ಲಿ 23.00 ಸರಪಳಿ ದೂರವನ್ನು ಇದೇ ಮೀಸಲು ಅರಣ್ಯ ಗಡಿಯಲ್ಲೇ ಈ ಕೆಳಗೆ ವಿವರಿಸಿದ ಅಳತೆ ತಪಶೀಲುಗಳಂತೆ ಚಲಿಸಿ ಸ್ಥಾನ ಸಂಖ್ಯೆ (5)ನ್ನು ಸೇರುತ್ತದೆ:

**ಅಳತೆ ತಪಶೀಲುಗಳು**

| ಸ್ಥಾನದಿಂದ | ಸ್ಥಾನಕ್ಕೆ | ಚೈನೇಜ್ ($66^0$) | ಬೇರಿಂಗ್ ಡಿಗ್ರಿಗಳಲ್ಲಿ |
|---|---|---|---|
| 2 | 3 | 4.00 | 198.00 |
| 3 | 4 | 7.50 | 148.00 |
| 4 | 5 | 11.50 | 181.00 |

**ದಕ್ಷಿಣಕ್ಕೆ:** ಪುನಃ ಇಲ್ಲಿಂದ ನೈರುತ್ಯಾಭಿಮುಖವಾಗಿ 12.50 ಸರಪಳಿಗಳ ದೂರವನ್ನು ಇದೇ ಮೀಸಲು ಅರಣ್ಯ ಗಡಿಯಲ್ಲೇ ಚಲಿಸಿ ಸ.ನಂ. 1ರ ಈಶಾನ್ಯ ಮೂಲೆಯಿಂದ ದಕ್ಷಿಣಾಭಿಮುಖವಾಗಿ ಇದೇ ಸ.ನಂ.ನ ಪೂರ್ವದ ಗಡಿಯಲ್ಲೇ 8.00 ಸರಪಳಿಗಳ ಅಂತರದಿಂದ ಸೇರುವ ಬಿಂದು ಇದೇ ಮೀಸಲು ಅರಣ್ಯ ಗಡಿಯಲ್ಲಿ ಸ್ಥಾನಸಂಖ್ಯೆ 6ನ್ನು ಸೇರುತ್ತದೆ.

**ಅಳತೆ ತಪಶೀಲುಗಳು**

| ಸ್ಥಾನದಿಂದ | ಸ್ಥಾನಕ್ಕೆ | ಚೈನೇಜ್ ($66^0$) | ಬೇರಿಂಗ್ ಡಿಗ್ರಿಗಳಲ್ಲಿ |
|---|---|---|---|
| 5 | 6 | 12.50 | 278.00 |

**ಪಶ್ಚಿಮಕ್ಕೆ:** ಪುನಃ ಇಲ್ಲಿಂದ ಈಶಾನ್ಯಾಭಿಮುಖವಾಗಿ 8.00 ಸರಪಳಿಗಳ ದೂರವನ್ನು ಸ.ನಂ. 1ರ ಪೂರ್ವದ ಗಡಿಯಲ್ಲೇ ಚಲಿಸಿ ಈಶಾನ್ಯ ಮೂಲೆ ಸ್ಥಾನಸಂಖ್ಯೆ 7ನ್ನು ಸೇರುತ್ತದೆ ಪುನಃ ಇಲ್ಲಿಂದ ವಾಯುವ್ಯಾಭಿಮುಖವಾಗಿ ಸ.ನಂ. 1ರ ಉತ್ತರದ ಗಡಿ ಸ.ನಂ. 4ರ (ಕೆರೆ) ಈಶಾನ್ಯ ಗಡಿಯಲ್ಲೇ 19.5 ಸರಪಳಿಗಳ ದೂರ ಕ್ರಮಿಸಿ ಸ.ನಂ. 5 ರ ಆಗ್ನೇಯ ಮೂಲೆಯನ್ನು ಸೇರುತ್ತದೆ ಪುನಃ ಇಲ್ಲಿಂದ ಸ.ನಂ. 5ರ ಪೂರ್ವದ ಗಡಿ ಮತ್ತು ಉತ್ತರ ದಿಕ್ಕಿನಲ್ಲಿ ಹೊಂದಿಕೊಂಡ ಕೆರೆಯ ಪೂರ್ವದ ಗಡಿಯಲ್ಲೇ 10.25 ಸರಪಳಿಗಳ ದೂರ ಕ್ರಮಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

ಹಕ್ಕು ದಾರಿ, ಸವಲತ್ತುಗಳು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ ಜಯಲಕ್ಷ್ಮಿ**

ಪಿ.ಆರ್. 300

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಅಪಜೀ 32 ಎಫ್‌ಎಎಫ್ 2006, ಬೆಂಗಳೂರು, ದಿನಾಂಕ: 19ನೇ ಜನವರಿ 2007**

1963ನೇ ಇಸವಿಯ ಕರ್ನಾಟಕ ಅರಣ್ಯ ಅಧಿನಿಯಮದ (1964ನೇ ಇಸವಿಯ ಕರ್ನಾಟಕ ಅರಣ್ಯ ಅಧಿನಿಯಮ–5) 4ನೇ ಪ್ರಕರಣದ ನಿಯಮಗಳ ಮೇರೆಗೆ ಕರ್ನಾಟಕ ರಾಜ್ಯ ಸರ್ಕಾರವು ಈ ಮೂಲಕ:

1. ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ಸಾಸಲು ಹೋಬಳಿ , ಸುತ್ತಳ್ಳಿ ಗ್ರಾಮದ ಜಮೀನನ್ನು ಇದಕ್ಕೆ ಲಗತ್ತಾಗಿರುವ ಅನುಸೂಚಿಯಲ್ಲಿ ವಿವರಿಸಲ್ಪಟ್ಟಿರುವ ಚಕ್ಕುಬಂದಿಯುಳ್ಳ ಪ್ರದೇಶವನ್ನು "ಮೀಸಲು ಅರಣ್ಯ"ವನ್ನಾಗಿ ಘೋಷಿಸಲು ಉದ್ದೇಶಿಸಿದೆ.

2 ಮೇಲ್ಕಂಡ ಪ್ರಕರಣದ 1 (ಸಿ) ಕಲಂನ್ನನುಸರಿಸಿ ಕರ್ನಾಟಕ ರಾಜ್ಯ ಸರ್ಕಾರದವರು ಅಂತಹ ಎಲ್ಲೆಗಳ ಒಳಗಿರುವ ಜಮೀನಿನಲ್ಲಿ ಅಥವಾ ಅದರ ಮೇಲೆ ಅಥವಾ ಅಂತಹ ಜಮೀನಿನ ಯಾವುದಾದರೂ ಅರಣ್ಯ ಉತ್ಪತ್ತಿಗೆ ಹಕ್ಕು ಬಾಧ್ಯತೆ ಇರುವ ಅಥವಾ ಹಕ್ಕು ಭಾಧ್ಯತೆ ಇದೆ ಎಂದು ಹೇಳುವ ಯಾವ ವ್ಯಕ್ತಿಗಾದರೂ ಯಾವುದಾದರೂ, ಹಕ್ಕು ಭಾಧ್ಯತೆಗಳಿಯೇ? ಅವುಗಳ ಸ್ವಭಾವವೇನು?ಮತ್ತು ಅವು ಎಷ್ಟರ ಮಟ್ಟಿನವು ಎಂಬ ಅಂಶಗಳನ್ನು ವಿಚಾರಣೆ ಮಾಡಿ, ನಿಶ್ಚಿಯಿಸಿ ಅವುಗಳ ವಿಷಯದಲ್ಲಿ ಮೇಲ್ಕಂಡ ಅಧಿನಿಯಮದ ಎರಡನೇ ಅಧ್ಯಾಯದಲ್ಲಿ ವಿಧಿಸಿರುವಂತೆ ಕ್ರಮ ಪಡಿಸುವುದಕ್ಕೆ ಬೆಂಗಳೂರು ಗ್ರಾಮಾಂತರ ಉಪ ವಿಭಾಗದ ಸಹಾಯಕ ಆಯುಕ್ತರು (ಅಸಿಸ್ಟೆಂಟ್ ಕಮೀಷನರ್) ರವರನ್ನು ಅರಣ್ಯ ವ್ಯವಸ್ಥಾಪನಾಧಿಕಾರಿಗಳನ್ನಾಗಿ ನೇಮಿಸಿದೆ ಅಧಿಸೂಚನೆಯಾದ ದಿನಾಂಕದಿಂದ ಒಂದು ವರ್ಷದೊಳಗೆ ಪ್ರದೇಶದ ಹಕ್ಕು ಬಾಧ್ಯತೆಯನ್ನು ಇತ್ಯರ್ಥಗೊಳಿಸುವುದು.

3 ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರಿಗೆ ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಪನಾಧಿಕಾರಿಗಳಿಗೆ ಸರ್ಕಾರದ ಪರವಾಗಿ ಸಹಾಯ ಮಾಡಲು ಹಾಜರಾಗಬೇಕೆಂದು ಸರ್ಕಾರದ ಆದೇಶಿಸಿದೆ ಮತ್ತು ಅಧಿಸೂಚನೆಯಲ್ಲಿ ತಿಳಿಸಿರುವ ಪ್ರದೇಶವನ್ನು ಒತ್ತುವರಿಯಾಗದಂತೆ ರಕ್ಷಣೆ ಮಾಡುವಂತೆಯೂ ನಿರ್ದೇಶಿಸಿದೆ.

4 ಮೇಲ್ಕಂಡ ಅಧಿನಿಯಮ 11,12, ಮತ್ತು 14ನೇ ಪ್ರಕರಣಗಳ ಪ್ರಕಾರ ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಯಾವುದೇ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗೆ ಬಾಧಿತವಾದ ವ್ಯಕ್ತಿಗಳು ಸಲ್ಲಿಸಿದ ಮೇಲ್ಮನವಿಗಳನ್ನು ಪರಿಶೀಲಿಸಲು ಸದರಿ ಅಧಿನಿಯಮ ಪ್ರಕರಣ 16 (1)ನೇ ಪ್ರಕಾರ ಕರ್ನಾಟಕ ಅಪಲೇಟ್ ಟ್ರಿಬ್ಯೂನಲ್ ನ್ಯಾಯ ಮಂಡಲಿಗೆ ಅಧಿಕಾರವಿರುತ್ತದೆ.

5 ಮೇಲ್ಕಂಡ ಅಧಿನಿಯಮ 15ನೇ ಪ್ರಕರಣದ ಪ್ರಕಾರ ಭಾದಿತವಾದ ಯಾವುದೇ ವ್ಯಕ್ತಿಯ ಸದರಿ ಅಧಿನಿಯಮದ ಪ್ರಕರಣ 16(2)ನೇ ಪ್ರಕಾರ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗೆ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

***ಅನುಸೂಚಿ***

| | |
|---|---|
| ಜಿಲ್ಲೆಯ ಹೆಸರು | : ಬೆಂಗಳೂರು ಗ್ರಾಮಾಂತರ |
| ತಾಲ್ಲೂಕಿನ ಹೆಸರು | : ದೊಡ್ಡಬಳ್ಳಾಪುರ |
| ಹೋಬಳಿಯ ಹೆಸರು | : ಸಾಸಲು |
| ಗ್ರಾಮದ ಹೆಸರು | : ಸುತ್ತಳ್ಳಿ |
| ಕ್ಷೇತ್ರದ ಸರ್ವೆ ನಂಬರು | : 7 |
| ಚಕ್ಕುಬಂದಿ | |
| | : ಉತ್ತರಕ್ಕೆ: ಉಜನಿ ಗ್ರಾಮ ಗಡಿ |
| | : ಪೂರ್ವಕ್ಕೆ : ಚೀಲೇನಹಳ್ಳಿ (ಮುದ್ದೇನಹಳ್ಳಿ ಎಸ್.ಎಫ್) |
| | : ದಕ್ಷಿಣಕ್ಕೆ : ಟೈರಾಪುರ ಗ್ರಾಮ |
| | : ಪಶ್ಚಿಮಕ್ಕೆ :ಕಂದಾಯ ಭೂಮಿ |
| ವಿಸ್ತೀರ್ಣ ಹೆಕ್ಟೇರುಗಳಲ್ಲಿ | : 46.00 ಹೆ. |
| ಕ್ಷೇತ್ರದ ಹೆಸರು | : ಸುತ್ತಳ್ಳಿ ಗ್ರಾಮ ಸರ್ವೆ ನಂ 7ರ ಬ್ಲಾಕ್ 1 ಮತ್ತು 2 |

**ಬ್ಲಾಕ್–1**

**ಉತ್ತರ:** ಸರ್ವೆ ರೇಖೆಯು ಚೀಲೇನಹಳ್ಳಿ ಗ್ರಾಮ ಸರ್ವೆ ನಂ 7 ರ ಉತ್ತರಾದ್ರಿಮೂಲೆಯಿಂದ ನೈರುತ್ಯಕ್ಕೆ ಸುಮಾರು 26 ಚೈನುಗಳ ದೂರದ ಸರ್ವೆ ಸ್ಥಳ 1 ರಿಂದ ಪ್ರಾರಂಭಗೊಂಡು ಆಗ್ನೇಯ ಹಾಗೂ ದಕ್ಷಿಣಾಭಿಮುಖವಾಗಿ ಚಲಿಸಿ ಸರ್ವೆ ನಂ. 10 ವಾಯುವ್ಯಮೂಲೆಯ ಸರ್ವೆ ಸ್ಥಳ 5ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ./ ಸರಪಳಿಗಳಲ್ಲಿ |
|---|---|---|
| 1–2 | $126^0$ | 6.00 |
| 2–3 | $208^0$ | 7.50 |
| 3–4 | $121^0$ | 7.00 |
| 4–5 | $191^0$ | 3.00 |

**ಪೂರ್ವ :–** ಸರ್ವೆ ರೇಖೆಯು ಸರ್ವೆಸ್ಥಳ 5 ರಿಂದ ಸರ್ವೆ ನಂಬರ್ 10ರ ಪಶ್ಚಿಮರೇಖೆ ಸರ್ವೆ ನಂಬರ್ 12ರ ಉತ್ತರ ಮತ್ತು ಪಶ್ಚಿಮರೇಖೆ ಸರ್ವೆ ನಂಬರ್ 13ರ ಪಶ್ಚಿಮರೇಖೆ ಸರ್ವೆ ನಂಬರ್ 15 ರ ಉತ್ತರ ಮತ್ತು ಪಶ್ಚಿಮರೇಖೆಯಲ್ಲಿ ಚಲಿಸಿ ಸರ್ವೆ ನಂಬರ್ 15ರ ನೈರುತ್ಯಮೂಲೆ ಸರ್ವೆಸ್ಥಳ 11ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ. ಸರಪಳಿಗಳಲ್ಲಿ ) |
|---|---|---|
| 5–6 | $164^0$ | 6.50 |
| 6–7 | $260^0$ | 9.50 |
| 7–8 | $186^0$ | 9.00 |
| 8–9 | $201^0$ | 4.00 |
| 9–10 | $272^0$ | 5.00 |
| 10–11 | $196^0$ | 7.00 |

**ದಕ್ಷಿಣಕ್ಕೆ** : ಸರ್ವೆ ರೇಖೆಯು ಸರ್ವೆ ಸ್ಥಳ 11 ರಿಂದ ಸರ್ವೆ ನಂಬರ್ 22 ಮತ್ತು 23 ರ ಉತ್ತರರೇಖೆಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ಸರ್ವೆ ನಂ 23ರ ವಾಯುವ್ಯಮೂಲೆ ಸೇರಿ ನಂತರ ಸರ್ವೆ ನಂ 9 ಪೂರ್ವರೇಖೆಯಲ್ಲಿ ಈಶಾನ್ಯಮೂಲೆ ಸೇರಿ ನಂತರ ಸದರಿ ಸರ್ವೆ ನಂಬರಿನ ಉತ್ತರರೇಖೆಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ಸದರಿ ಸರ್ವೆನಂಬರಿನ ವಾಯುವ್ಯ ಮೂಲೆ ಸೇರಿ ನಂತರ ವಾಯುವ್ಯ ದಿಕ್ಕಿಗೆ ತಿರುಗಿ ಸರ್ವೆ ನಂಬರ್ 7 ರ ವಾಯುವ್ವ ಗಡಿರೇಖೆಯಲ್ಲಿ ಸರ್ವೆ ಸ್ಥಳ 16ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ. ಸರಪಳಿಗಳಲ್ಲಿ ) |
|---|---|---|
| 11–12 | $266^0$ | 4.50 |
| 12–13 | $280^0$ | 6.50 |
| 13–14 | $20^0$ | 5.00 |
| 14–15 | $270^0$ | 6.00 |
| 15–16 | $280^0$ | 4.00 |

**ಪಶ್ಚಿಮಕ್ಕೆ** : ಸರ್ವೆ ರೇಖೆಯು ಸರ್ವೆ ಸ್ಥಳ 16 ರಿಂದ ಸರ್ವೆ ನಂಬರ್ 7ರ ವಾಯುವ್ವ ಗಡಿರೇಖೆಯಲ್ಲಿ ಈಶಾನ್ಯಾಭಿಮುಖವಾಗಿ ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಚಲಿಸಿ ಪ್ರಾರಂಭಿಕ ಸ್ಥಳ 1ನ್ನು ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ. ಸರಪಳಿಗಳಲ್ಲಿ ) |
|---|---|---|
| 16–17 | $51^0$ | 6.00 |
| 17–18 | $51^0$ | 6.00 |
| 18–19 | $50^0$ | 5.00 |
| 19–20 | $37^0$ | 6.00 |
| 20–21 | $37^0$ | 7.00 |
| 21–22 | $37^0$ | 7.50 |
| 22–01 | $37^0$ | 7.00 |

**ಉತ್ತರ :** ಸರ್ವೆ ರೇಖೆಯು ಚೀಲೇನಹಳ್ಳಿ ಗ್ರಾಮದ ಪಶ್ಚಿಮ ಗಡಿ ರೇಖೆ ಮತ್ತು ಸುತ್ತಳ್ಳಿ ಗ್ರಾಮ ಸ.ನಂ. 7ರ ಪೂರ್ವಾಗ್ರ ಮೂಲೆ ಸೇರುವ ಬಾಂದ್‌ನಿಂದ ವಾಯುವ್ಯಕ್ಕೆ ಸುಮಾರು 3.75 ಚೈನುಗಳ ದೂರದಿಂದ ಸರ್ವೆ ಸ್ಥಳ 23 ರಿಂದ ಪ್ರಾರಂಭಗೊಂಡು ಸದರಿ ಸ.ನಂ. 7ರ ಪೂರ್ವಾಗ್ರಮೂಲೆಯನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ. ಸರಪಳಿಗಳಲ್ಲಿ ) |
|---|---|---|
| 23–24 | $110^0$ | 4.00 |

**ಪೂರ್ವ :** ಸರ್ವೆ ರೇಖೆಯು ಸ್ಥಳ 24 ರಿಂದ ಸುತ್ತಳ್ಳಿ ಸರ್ವೆ ನಂಬರ್ 7 ರ ಪೂರ್ವಗಡಿ ರೇಖೆಯಲ್ಲಿ ನೈರುತ್ಯಾಭಿಮುಖವಾಗಿ ಹೊರಟು ಸರ್ವೆ ನಂಬರ್ 7 ರ ಆಗ್ನೇಯ ಮೂಲೆ ಸ್ಥಳ 39ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ. ಸರಪಳಿಗಳಲ್ಲಿ ) |
|---|---|---|
| 24–39 | $203^0$ | 91.00 |

**ದಕ್ಷಿಣಕ್ಕೆ :** ಸರ್ವೆ ರೇಖೆಯು ಸರ್ವೆ ಸ್ಥಳ 39 ರಿಂದ ಸರ್ವೆ ನಂ 7ರ ದಕ್ಷಿಣ ಗಡಿರೇಖೆಯಲ್ಲಿ ಪಶ್ಚಿಮಾಭಿಮುಖವಾಗಿ ಹೊರಟು ಸದರಿ ಗಡಿ ರೇಖೆಯಲ್ಲಿ ಸರ್ವೆ ಸ್ಥಳ 40 ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ. ಸರಪಳಿಗಳಲ್ಲಿ ) |
|---|---|---|
| 39–40 | $300^0$ | 5.00 |

**ಪಶ್ಚಿಮಕ್ಕೆ :** ಸರ್ವೆ ರೇಖೆಯು ಸರ್ವೆ ಸ್ಥಳ 40 ರಿಂದ ಈಶಾನ್ಯಾಭಿಮುಖ, ವಾಯುವ್ಯಾಭಿಮುಖ ಉತ್ತರಾಭಿಮುಖ ಹೀಗೆ ಸರ್ವೆ ನಂಬರ್ 7ರಲ್ಲಿ ಕ್ರಮವಾಗಿ ಹೊರಟು ಪ್ರಾರಂಭಿಕ ಸ್ಥಳ 1ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ಸೇರುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮೀ. ಸರಪಳಿಗಳಲ್ಲಿ ) |
|---|---|---|
| 40–41 | $550^0$ | 3.00 |
| 41–42 | $339^0$ | 7.00 |
| 42–43 | $5^0$ | 6.00 |
| 43–44 | $11^0$ | 6.00 |
| 44–45 | $1^0$ | 6.00 |
| 45–46 | $49^0$ | 5.00 |
| 46–47 | $356^0$ | 7.50 |
| 47–48 | $340^0$ | 6.00 |
| 48–49 | $16^0$ | 7.50 |
| 49–50 | $15^0$ | 4.00 |
| 50–51 | $48^0$ | 4.50 |
| 51–52 | $62^0$ | 4.50 |
| 52–53 | $88^0$ | 4.00 |
| 53–54 | $90^0$ | 9.00 |
| 54–55 | $72^0$ | 9.00 |
| 55–56 | $27^0$ | 3.00 |
| 56–57 | $29^0$ | 3.00 |
| 57–58 | $338^0$ | 9.00 |
| 58–59 | $26^0$ | 6.00 |
| 59–60 | $78^0$ | 4.00 |
| 60–23 | $360^0$ | 3.50 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ ಜಯಲಕ್ಷ್ಮೀ**

ಪಿ.ಆರ್. 301

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಅಪಜೀ 63 ಎಫ್‌ಎಫ್ 2006, ಬೆಂಗಳೂರು, ದಿನಾಂಕ: 12ನೇ ಜನವರಿ 2007.**

1963ನೇ ಕರ್ನಾಟಕ ಅರಣ್ಯ ಅಧಿನಿಯಮ (1964ನೇ ಕರ್ನಾಟಕ ಕಾಯ್ದೆ 5)ರ ಕಲಂ 17ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಈ ಕೆಳಗೆ 1ನೇ ಅನುಸೂಚಿಯಲ್ಲಿ ನಮೂದಿಸಿರುವ ಜಮೀನುಗಳನ್ನು 12–1–2007ನೇ ದಿನಾಂಕದಿಂದ, 11ನೇ ಅನುಸೂಚಿಯಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು ಮೀಸಲು ಅರಣ್ಯ'ವೆಂದು ಕರ್ನಾಟಕ ಸರ್ಕಾರವು ಕಾದಿರಿಸಿದೆ ಎಂದು ಈ ಮೂಲಕ ಘೋಷಿಸಲಾಗಿದೆ.

***ಅನುಸೂಚಿ***

1) ಜಿಲ್ಲೆಯ ಹೆಸರು : ಶಿವಮೊಗ್ಗ
2) ತಾಲ್ಲೂಕು ಹೆಸರು : ಭದ್ರಾವತಿ
3) ಹೋಬಳಿಯ ಹೆಸರು : ಕೂಡಲಿಗೆರೆ
4) ಗ್ರಾಮದ ಹೆಸರು : ಗುಡ್ಡದ ನೇರಳೆ ಕೆರೆ
5) ಸರ್ವೆ ನಂಬರು : 35 ಮತ್ತು 12
6) ವಿಸ್ತೀರ್ಣ : 331ಎ–00ಗುಂ. ಅಥವಾ 134–00 ಹೆಕ್ಟೇರ್
7) ಬ್ಲಾಕಿನ ಹೆಸರು : ಗುಡ್ಡದ ನೇರಳೆಕೆರೆ ಮೀಸಲು ಅರಣ್ಯ

**ಗಡಿ ವಿವರಣೆ**

**ಬ್ಲಾಕ್–1**

**ಸರ್ವೆ ನಂಬರ್ 35 ವಿಸ್ತೀರ್ಣ 76ಎ–16ಗುಂ ಅಥವಾ 31–00 ಹೆಕ್ಟೇರ್ಸ್**

**ಉತ್ತರ:** ಗಡಿರೇಖೆಯು ಸ್ಥಾನಸಂಖ್ಯೆ 1ರಿಂದ ಪ್ರಾರಂಭವಾಗಿರುತ್ತದೆ. ಇದು ಬಸಲಿಕಟ್ಟೆ ಮತ್ತು ಗುಡ್ಡದ ನೇರಳೆಕೆರೆ ಗ್ರಾಮಗಳ ಸಾಮಾನ್ಯ ಗಡಿ ರೇಖೆಯ ಮೇಲೆ ನಾಲೆಯ ಬಲದಂಡೆ ಮೇಲೆ ಇದೆ. ಇಲ್ಲಿಂದ ಗಡಿ ರೇಖೆಯು ಬಸಲಿಕಟ್ಟೆ ಮತ್ತು ಗುಡ್ಡದನೇರಳೆಕೆರೆ ಗ್ರಾಮಗಳ ಸಾಮಾನ್ಯ ಗಡಿ ರೇಖೆಯ ಮೇಲೆ ಪೂರ್ವಾಭಿಮುಖವಾಗಿ ಚಲಿಸಿ ಸ್ಥಾನಸಂಖ್ಯೆ 2ನ್ನು 84 ಸರಪಳಿ (33 ಅಡಿ) ದೂರದಲ್ಲಿ ಸೇರುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ ಇಂದ–ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 1–2 | 87.00 | 84–00 |

**ಪೂರ್ವ:** ಗಡಿರೇಖೆಯು ಸ್ಥಾನಸಂಖ್ಯೆ 2 ರಿಂದ 52.50 ಸರಪಳಿಗಳ (33ಅಡಿ) ದೂರ ಸರ್ವೆ ನಂಬರ್ 34 ಮತ್ತು 35ರ ಸಾಮಾನ್ಯ ಗಡಿ ರೇಖೆಯ ಮೇಲೆ ದಕ್ಷಿಣಾಭಿಮುಖವಾಗಿ ಸಾಗಿ, ನಾಲೆಯ ಬಲ ಭಾಗದಲ್ಲಿರುವ ಸ್ಥಾನ ಸಂಖ್ಯೆ 3ನ್ನು ತಲುಪುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ ಇಂದ– ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 2–3 | 186.00 | 52–50 |

**ದಕ್ಷಿಣ:** ಗಡಿ ರೇಖೆಯು ಸ್ಥಾನಸಂಖ್ಯೆ 3 ರಿಂದ 19 ಸರಪಳಿಗಳ ದೂರ ಸರ್ವೆ ನಂಬರ್ 33ರಲ್ಲಿ ನಾಲೆಯ ಬಲಭಾಗದ ದಂಡೆಯ ಮೇಲೆಯೇ ಪಶ್ಚಿಮಾಭಿಮುಖವಾಗಿ ಸಾಗಿ ಸ್ಥಾನದ ಸಂಖ್ಯೆ 4ನ್ನು ತಲುಪುತ್ತದೆ. ಅನಂತರ ಗಡಿ ರೇಖೆಯು ಸ್ಥಾನಸಂಖ್ಯೆ 4 ರಿಂದ 12 ಸರಪಳಿಗಳ ದೂರ ಸರ್ವೆ ನಂಬರ್ 35ರಲ್ಲಿ ನಾಲೆಯ ಬಲಭಾಗದ ದಂಡೆಯ ಮೇಲೆಯೇ ಪಶ್ಚಿಮ ಮತ್ತು ವಾಯುವ್ಯ ದಿಕ್ಕುಗಳ ನಡುವೆ ಸಾಗಿ ಸ್ಥಾನ ಸಂಖ್ಯೆ 5ನ್ನು ತಲುಪುತ್ತದೆ. ನಂತರ ಸ್ಥಾನ ಸಂಖ್ಯೆ 5 ರಿಂದ 18 ಸರಪಳಿಗಳ ದೂರ ಸರ್ವೆ ನಂಬರ್ 35ರಲ್ಲಿ ನಾಲೆಯ ಬಲಭಾಗದ ದಂಡೆಯ ಮೇಲೆಯೇ ಪಶ್ಚಿಮ ಮತ್ತು ವಾಯುವ್ಯ ದಿಕ್ಕುಗಳ ನಡುವೆ ಸಾಗಿ ಸ್ಥಾನ ಸಂಖ್ಯೆ 6ನ್ನು ಸೇರುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ ಇಂದ–ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 3–4 | 264.00 | 19–00 |

| | | |
|---|---|---|
| 4–5 | 305.00 | 12–00 |
| 5–6 | 287.00 | 18–00 |

**ಪಶ್ಚಿಮ:** ನಂತರ ಗಡಿ ರೇಖೆಯು ಸ್ಥಾನ ಸಂಖ್ಯೆ 6 ರಿಂದ 53 ಸರಪಳಿಗಳ ದೂರ ಸರ್ವೆ ನಂಬರ್ 35ರಲ್ಲಿ ನಾಲೆಯ ಬಲ ದಂಡೆಯ ಮೇಲೆ ವಾಯುವ್ಯಾಭಿಮುಖವಾಗಿ ಸಾಗಿ ಸ್ಥಾನ ಸಂಖ್ಯೆ 7 ಮತ್ತು 8 ರ ಮೂಲಕ ಹಾದು ಪ್ರಾರಂಭದ ಸ್ಥಾನಸಂಖ್ಯೆ 1ನ್ನು ಸೇರುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ<br>ಇಂದ – ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 6–7 | 314.00 | 23–00 |
| 7–8 | 293.00 | 12–00 |
| 8–1 | 351.00 | 18–00 |

**ಬ್ಲಾಕ್ –11**

**ಸರ್ವೆ ನಂಬರ್ 12 ಮತ್ತು 35ರ ಭಾಗ**

ವಿಸ್ತೀರ್ಣ 225–00 ಎಕರೆ+29–24ಎಕರೆ–254–24 ಎಕರೆ ಅಥವಾ 103–00 ಹೆಕ್ಟೇರ್ಸ್

**ಉತ್ತರ:** ಭೂಮಾಪನ ರೇಖೆಯು ಸರ್ವೆ ನಂಬರ್ 35ರ ದಕ್ಷಿಣ ಭಾಗದ ವಾಯುವ್ಯ ದಿಕ್ಕಿನಲ್ಲಿ ನಾಲೆಯ ಬಲ ದಂಡೆಯ ಮೇಲಿರುವ ಸ್ಥಾನ ಸಂಖ್ಯೆ 1 ರಿಂದ ಪ್ರಾರಂಭವಾಗುತ್ತದೆ. ಇಲ್ಲಿಂದ ಗಡಿ ರೇಖೆಯು 35 ಸರಪಳಿಗಳ ದೂರ ಸರ್ವೆ ನಂಬರ್ 35ರಲ್ಲಿ ನಾಲೆಯ ಬಲ ದಂಡೆಯ ಮೇಲೆಯೇ ಪೂರ್ವಾಭಿಮುಖವಾಗಿ ಸಾಗಿ ಸರ್ವೆ ನಂಬರ್ 34 ಮತ್ತು 35 ರ ಸಾಮಾನ್ಯ ಗಡಿ ರೇಖೆಯ ಮೇಲೆ ಇರುವ ಸ್ಥಾನ ಸಂಖ್ಯೆ 2ನ್ನು ತಲುಪುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ<br>ಇಂದ– ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 1 –2 | 87.00 | 35–00 |

**ಪೂರ್ವ:** ಗಡಿ ರೇಖೆಯು ಸ್ಥಾನಸಂಖ್ಯೆ 2 ರಿಂದ 27 ಸರಪಳಿಗಳ ದೂರ ಸರ್ವೆ ನಂಬರ್ 34 ಮತ್ತು 35ರ ಸಾಮಾನ್ಯ ಗಡಿ ರೇಖೆಯ ಮೇಲೆ ದಕ್ಷಿಣಾಭಿಮುಖವಾಗಿ ಸಾಗಿ ಸ್ಥಾನ ಸಂಖ್ಯೆ 3ನ್ನು ತಲುಪುತ್ತದೆ. ನಂತರ ಗಡಿ ರೇಖೆಯು ಸ್ಥಾನ ಸಂಖ್ಯೆ 3 ರಿಂದ 80 ಸರಪಳಿಗಳ ದೂರ ಸರ್ವೆನಂಬರ್ 12 ಮತ್ತು 33ರ ಸಾಮಾನ್ಯ ಗಡಿ ರೇಖೆಯ ಮೇಲೆ ದಕ್ಷಿಣ ಮತ್ತು ನೈರುತ್ಯ ದಿಕ್ಕುಗಳ ನಡುವೆ ಸಾಗಿ ಸ್ಥಾನ ಸಂಖ್ಯೆ 4ನ್ನು ಸೇರುತ್ತದೆ. ನಂತರ ಗಡಿ ರೇಖೆಯು ಸ್ಥಾನ ಸಂಖ್ಯೆ 4 ರಿಂದ 127 ಸರಪಳಿಗಳ ದೂರ ಸರ್ವೆ ನಂಬರ್ 12 ಮತ್ತು 32ರ ಸಾಮಾನ್ಯ ಗಡಿ ರೇಖೆಯ ಮೇಲೆ ನೈರುತ್ಯ ಮತ್ತು ಪಶ್ಚಿಮ ದಿಕ್ಕುಗಳ ನಡುವೆ ಸಾಗಿ ದೇವನಹಳ್ಳಿ ಮತ್ತು ಗುಡ್ಡದ ನೇರಳೆಕೆರೆ ಗ್ರಾಮಗಳ ಸಾಮಾನ್ಯ ಗಡಿಯ ಕೂಡು ಬಾಂದ್ ನಲ್ಲಿರುವ ಸ್ಥಾನ ಸಂಖ್ಯೆ 5ನ್ನು ಸೇರುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ<br>ಇಂದ –ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 2–3 | 186.00 | 27–00 |
| 3–4 | 205.00 | 80–00 |
| 4–5 | 243.00 | 127–00 |

**ದಕ್ಷಿಣ:** ಗಡಿ ರೇಖೆಯು ಸ್ಥಾನ ಸಂಖ್ಯೆ 5 ರಿಂದ 57 ಸರಪಳಿಗಳ ದೂರ ದೇವನಹಳ್ಳಿ ಮತ್ತು ಕೋಮಾರನಹಳ್ಳಿಯ ಸಾಮಾನ್ಯ ಗಡಿ ರೇಖೆಯ ಮೇಲೆ ಪಶ್ಚಿಮಾ ಮತ್ತು ವಾಯುವ್ಯ ದಿಕ್ಕುಗಳ ನಡುವೆ ಸಾಗಿ ಸ್ಥಾನಸಂಖ್ಯೆ 6ರ ಮೂಲಕ ಹಾದು ಸ್ಥಾನ ಸಂಖ್ಯೆ 7ನ್ನು ತಲುಪುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ<br>ಇಂದ – ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 5–6 | 295.00 | 33–00 |
| 6–7 | 313.00 | 24–00 |

**ಪಶ್ಚಿಮ:** ಗಡಿ ರೇಖೆಯು ಸ್ಥಾನಸಂಖ್ಯೆ 7 ರಿಂದ 227 ಸರಪಳಿಗಳ ದೂರ ನಾಲೆಯ ಬಲದಂಡೆಯ ಮೇಲೆ ಸರ್ವೆ ನಂಬರ್ 12ರಲ್ಲಿ ಈಶಾನ್ಯಾಭಿಮುಖವಾಗಿ ಸಾಗಿ ಸ್ಥಾನ ಸಂಖ್ಯೆ 8, 9, 10, 11, 12, 13, 14, 15, 16, 17, 18 ಮತ್ತು 19 ರ ಮೂಲಕ ಹಾದು ಪ್ರಾರಂಭದ ಸ್ಥಾನ ಸಂಖ್ಯೆ 1ನ್ನು ಸೇರುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನಸಂಖ್ಯೆ ಇಂದ – ಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ $33^0$) |
|---|---|---|
| 7–8 | 72.00 | 9–00 |
| 8–9 | 58.00 | 15–00 |
| 9–10 | 70.00 | 13–00 |
| 10–11 | 66.00 | 13–00 |
| 11–12 | 85.00 | 24–00 |
| 12–13 | 42.00 | 11–00 |
| 13–14 | 30.00 | 18–00 |
| 14–15 | 32.00 | 16–00 |
| 15–16 | 57.00 | 27–00 |
| 16–17 | 45.00 | 11–00 |
| 17–18 | 50.00 | 23–00 |
| 18–19 | 25.00 | 28–00 |
| 19–1 | 72.00 | 10–00 |

ದಾರಿಯ ಹಕ್ಕುಗಳು

ಯಾವುದೂ ಇರುವುದಿಲ್ಲ

**ಇತರೆ ಹಕ್ಕುಗಳು**

1. ಎಳೆಯ ನೆಡುತೋಪುಗಳಲ್ಲಿ ವಿನಃ ಗ್ರಾಮಸ್ಥರು ನಿರ್ಬಂಧವಿಲ್ಲದೇ ತಮ್ಮ ಜಾನುವಾರುಗಳಿಗೆ ಹುಲ್ಲು ಮೇಯಿಸಬಹುದು.

2. ಎಳೆಯ ನೆಡುತೋಪುಗಳ ವಿನಃ ಗ್ರಾಮಸ್ಥರು ನಂಬಿಕೆ ಅರ್ಹ ಉದ್ದೇಶಕ್ಕೆ ಹಸಿರು ಎಲೆಗಳನ್ನು ಸಂಗ್ರಹಿಸಬಹುದಾಗಿದೆ.

3. ಗ್ರಾಮಸ್ಥರು ತಮ್ಮ ವಾಸ್ತವಿಕ ಉಪಯೋಗಕ್ಕಾಗಿ ಒಣ ಸೌದೆಗಳನ್ನು ಉಚಿತವಾಗಿ ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ ಜಯಲಕ್ಷ್ಮೀ**

ಪಿ.ಆರ್. 302

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಅಪಜೀ 67 ಎಫ್‌ಎಎಫ್ 2006, ಬೆಂಗಳೂರು, ದಿನಾಂಕ: 12ನೇ ಜನವರಿ 2007.**

1963ನೇ ಕರ್ನಾಟಕ ಅರಣ್ಯ ಅಧಿನಿಯಮ (1964ನೇ ಕರ್ನಾಟಕ ಕಾಯ್ದೆಯ)5ರ ಕಲಂ 17ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಕರ್ನಾಟಕ ಸರ್ಕಾರದ ಉದಾರ ಭಾವನೆಯ ಮೇರೆಗೆ ಸರ್ಕಾರದ ಅಧಿಸೂಚನೆಯ ಸಂಖ್ಯೆ:ಎಫ್ ಎಫ್ ಡಿ 257 ಎಫ್ ಎಎಫ್ 80 ದಿನಾಂಕ:30–12–1987ರ ಪ್ರಕಾರ ಈ ಕೆಳಗೆ ಅನುಸೂಚಿಯಲ್ಲಿ ನಮೂದಿಸಿರುವ ಜಮೀನುಗಳನ್ನು 12–1–2007ನೇ ದಿನಾಂಕದಿಂದ ಅನುಸೂಚಿಯಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು ಮೀಸಲು ಅರಣ್ಯ'ವೆಂದು ಕರ್ನಾಟಕ ಸರ್ಕಾರವು ಈ ಮೂಲಕ ಘೋಷಿಸಲಾಗಿದೆ.

***ಅನುಸೂಚಿ***

1) ಜಿಲ್ಲೆ ಹೆಸರು : ಶಿವಮೊಗ್ಗ
2) ತಾಲ್ಲೂಕು ಹೆಸರು : ಭದ್ರಾವತಿ
3) ಹೋಬಳಿಯ ಹೆಸರು : ಹೊಳೆಹೊನ್ನೂರು
4) ಗ್ರಾಮದ ಹೆಸರು : ಬೆಳ್ಳಿಗೆರೆ
5) ಸರ್ವೆ ನಂಬರು : 36
6) ವಿಸ್ತೀರ್ಣ : 251–00 ಎಕರೆ ಅಥವಾ 101.517 ಹೆಕ್ಟೇರ್
7) ಬ್ಲಾಕಿನ ಹೆಸರು : ಬೆಳ್ಳಿಗೆರೆ ಮೀಸಲು ಅರಣ್ಯ

### ಗಡಿ ವಿವರಣೆ

**ಉತ್ತರ:** ರೇಖೆಯು ಸ್ಥಾನ ಸಂಖ್ಯೆ 15ಎ ನಿಂದ ಪ್ರಾರಂಭವಾಗುತ್ತದೆ. ಅದು ಕಾಗೆಹಳ್ಳ ಪಕ್ಕದಲ್ಲಿ ಸರ್ವೆ ನಂಬರ್ 36 ರಲ್ಲಿರುತ್ತದೆ. ಇದು ಸರ್ವೆ ನಂಬರು 18ರ ಈಶಾನ್ಯ ಮೂಲೆಬಾಂದ್‌ನಿಂದ 3.50 ಸರಪಳಿ ದೂರದಲ್ಲಿರುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 15ಎ ರಿಂದ 15ಕ್ಕೆ ಈಶಾನ್ಯ ಮತ್ತು ಪೂರ್ವ ದಿಕ್ಕುಗಳ ನಡುವೆ 75.30 ಡಿಗ್ರಿಯಲ್ಲಿ ಕಾಗೆಹಳ್ಳ ಪಕ್ಕದಲ್ಲಿ 3.50 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 15 ರಿಂದ 14ಕ್ಕೆ ಆಗ್ನೇಯ ದಿಕ್ಕಿನ ಕಡೆಗೆ 131.00 ಡಿಗ್ರಿಯಲ್ಲಿ ಕಾಗೆಹಳ್ಳಕ್ಕೆ ಹೊಂದಿಕೊಂಡಂತೆ 4.00 ಸರಪಳಿ ದೂರದಲ್ಲಿ ಚಲಿಸುತ್ತದೆ. ಪುನಃ ರೇಖೆಯು ಸ್ಥಾನ ಸಂಖ್ಯೆ 14 ರಿಂದ 13ಕ್ಕೆ ಆಗ್ನೇಯ ದಿಕ್ಕಿನ ಕಡೆಗೆ 142.00 ಡಿಗ್ರಿಯಲ್ಲಿ ಕಾಗೆಹಳ್ಳಕ್ಕೆ ಹೊಂದಿಕೊಂಡಂತೆ 3 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನ ಸಂಖ್ಯೆ 13 ರಿಂದ 12ಕ್ಕೆ ಈಶಾನ್ಯ ಮತ್ತು ಪೂರ್ವ ದಿಕ್ಕುಗಳ ನಡುವೆ 77.00 ಡಿಗ್ರಿಯಲ್ಲಿ ಕಾಗೆಹಳ್ಳಕ್ಕೆ ಹೊಂದಿಕೊಂಡಂತೆ 3.00 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 12 ರಿಂದ 11ಕ್ಕೆ ಉತ್ತರ ಮತ್ತು ಈಶಾನ್ಯ ದಿಕ್ಕುಗಳ ನಡುವೆ 23.00 ಡಿಗ್ರಿಯಲ್ಲಿ ಕಾಗೆಹಳ್ಳಕ್ಕೆ ಹೊಂದಿಕೊಂಡಂತೆ 3.00 ಸರಪಳಿ ದೂರ ಚಲಿಸುತ್ತದೆ

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ | ಸರಪಳಿ ದೂರ |
|---|---|---|---|
| 13ಎ | 15 | 75.50 | 3.50 |
| 15 | 14 | 131.00 | 4.00 |
| 14 | 13 | 142.00 | 3.00 |
| 13 | 12 | 77.00 | 3.00 |
| 12 | 11 | 23.00 | 3.00 |

**ಪೂರ್ವ:** ರೇಖೆಯು ಸ್ಥಾನಸಂಖ್ಯೆ 11 ರಿಂದ 10ಎಗೆ ಸರ್ವೆ ನಂಬರು 36ರಲ್ಲಿ ದಕ್ಷಿಣಾಭಿಮುಖವಾಗಿ 9.00 ಸರಪಳಿ ದೂರ ಚಲಿಸುತ್ತದೆ. ಮತ್ತು ಅದು ರೈಲ್ವೆ ಟ್ರಾಕನ್ನು ದಾಟುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 10ಎ ರಿಂದ 10ಕ್ಕೆ ನೈರುತ್ಯ ದಿಕ್ಕಿನ ಕಡೆಗೆ ಸರ್ವೆ ನಂಬರ್ 36ರಲ್ಲಿ ರೈಲ್ವೆ ಟ್ರಾಕಿನ ಮೇಲೆ 8.00 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನ ಸಂಖ್ಯೆ 10 ರಿಂದ 9ಕ್ಕೆ ದಕ್ಷಿಣ ಮತು ಆಗ್ನೇಯ ದಿಕ್ಕುಗಳ ನಡುವೆ ಸರ್ವೆ ನಂಬರ್ 36ರಲ್ಲಿ 9 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 9 ರಿಂದ 8ಕ್ಕೆ ಸರ್ವೆ ನಂಬರು 36ರಲ್ಲಿ ನೈರುತ್ಯ ಮತ್ತು ಪಶ್ಚಿಮ ದಿಕ್ಕುಗಳ ನಡುವೆ 8 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 8 ರಿಂದ 7ಎಗೆ ಉತ್ತರ ಮತ್ತು ವಾಯುವ್ಯ ದಿಕ್ಕುಗಳ ನಡುವೆ 7.75 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನ ಸಂಖ್ಯೆ 7ಎ ರಿಂದ 5ಎಗೆ ಸ್ಥಾನ ಸಂಖ್ಯೆ ಬಿಂದುವಾದ 7, 6ಎ ಮತ್ತು 6ರ ಮೂಲಕ ಹಲವಾರು ದಿಕ್ಕುಗಳಲ್ಲಿ ನಂಬರು 36ರಲ್ಲಿ ರೈಲ್ವೆ ಟ್ರಾಕಿನ ಮೇಲೆ 23 ಸರಪಳಿ ದೂರ ಚಲಿಸುತ್ತದೆ ಮುಂದೆ ರೇಖೆಯು ಸ್ಥಾನ ಸಂಖ್ಯೆ 5ಎ ರಿಂದ 5ಕ್ಕೆ ಈಶಾನ್ಯ ಮತ್ತು ಪೂರ್ವ ದಿಕ್ಕುಗಳ ನಡುವೆ (ಎನ್‌ಇಇ) ಸರ್ವೆ ನಂಬರು 36ರಲ್ಲಿ 8.50 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 5 ರಿಂದ 4ಎಗೆ ಸರ್ವೆ ನಂಬರು 36ರಲ್ಲಿ ಉತ್ತರಾಭಿಮುಖವಾಗಿ 11.00 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನ ಸಂಖ್ಯೆ 4 ರಿಂದ 3ಕ್ಕೆ ದಕ್ಷಿಣ ಮತ್ತು ನೈರುತ್ಯಾ ದಿಕ್ಕುಗಳ ನಡುವೆ ಸರ್ವೆ ನಂಬರ್ 36.00 ಪಶ್ಚಿಮದ ಗಡಿಯ ಮೇಲೆ 42.50 ಸರಪಳಿ ದೂರ ಚಲಿಸುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಈ ಕೆಳಗಿನಂತಿದೆ:

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ | ಸರಪಳಿ ದೂರ |
|---|---|---|---|
| 11 | 10ಎ | 181.00 | 3.50 |
| 10ಎ | 10 | 250.00 | 8.00 |
| 10 | 9 | 163.00 | 9.00 |
| 9 | 8 | 245.00 | 8.00 |
| 8 | 7ಎ | 344.00 | 7.75 |
| 7 ಎ | 7 | 225.00 | 5.00 |
| 7 | 6ಎ | 203.00 | 4.00 |
| 6ಎ | 6 | 175.00 | 3.00 |
| 6 | 5ಎ | 152.00 | 11.00 |
| 5ಎ | 5 | 72.00 | 8.50 |
| 5 | 4ಎ | 350.00 | 11.00 |

| | | | |
|---|---|---|---|
| 4ಎ | 4 | 104.00 | 9.50 |
| 4 | 3 | 192.00 | 42.50 |

**ದಕ್ಷಿಣ:** ರೇಖೆಯು ಸ್ಥಾನ ಸಂಖ್ಯೆ 3 ರಿಂದ 2ಬಿ ಗೆ ಸರ್ವೆ ನಂಬರು 36ರಲ್ಲಿ ಪಶ್ಚಿಮಾಭಿಮುಖವಾಗಿ 4.75 ಸರಪಳಿ ದೂರ ಚಲಿಸುತ್ತದೆ ಮತ್ತು ಅದು ರೈಲ್ವೆ ಟ್ರಾಕನ್ನು ಮುಟ್ಟುತ್ತದೆ ಪುನಃ ರೇಖೆಯು ಸ್ಥಾನ ಸಂಖ್ಯೆ 2 ಬಿ ರಿಂದ 2ಎಗೆ ದಕ್ಷಿಣಾಭಿಮುಖವಾಗಿ ರೈಲ್ವೆ ಟ್ರಾಕಿನ ಮೇಲೆ 4.00 ಸರಪಳಿ ದೂರ ಚಲಿಸಿ ಮತ್ತು ಅದು ನೆಟ್ಟಕಲಹಟ್ಟಿ ಗಡಿಯನ್ನು ಮುಟ್ಟುತ್ತದೆ. ಪುನಃ ರೇಖೆಯು ಸ್ಥಾನ ಸಂಖ್ಯೆ 2 ರಿಂದ ಪಶ್ಚಿಮಾಭಿಮುಖವಾಗಿ ನೆಟ್ಟಕಲಹಟ್ಟಿ ಗಡಿಯ ಮೇಲೆ 13.25 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 2ರಿಂದ 1ಕ್ಕೆ ನೈರುತ್ಯ ಮತ್ತು ಪಶ್ಚಿಮ ದಿಕ್ಕುಗಳ ನಡುವೆ ನೆಟ್ಟಕಲಹಟ್ಟಿ ಗಡಿ ರೇಖೆಯ ಮೇಲೆ 37.30 ಸರಪಳಿ ದೂರ ಚಲಿಸುತ್ತದೆ. ಮತು ಅದು ಸರ್ವೆ ನಂಬರು 36ರ ಕೂಡುಬಾಂದುವನ್ನು ಮತ್ತು ಸರ್ವೆ ನಂ 13 ರ ನೈರುತ್ಯಾ ಮೂಲೆಯನ್ನು ಮುಟ್ಟುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ಬೇರಿಂಗ್ ಮತ್ತು ದೂರ ಈ ಕೆಳಗಿನಂತಿದೆ:

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ | ಸರಪಳಿ ದೂರ |
|---|---|---|---|
| 3 | 2ಬಿ | 273.00 | 4.75 |
| 2ಬಿ | 2ಎ | 179.00 | 4.00 |
| 2ಎ | 2 | 278.00 | 13.25 |
| 2 | 1 | 258.00 | 37.30 |

**ಪಶ್ಚಿಮ:** ರೇಖೆಯು ಸ್ಥಾನ ಸಂಖ್ಯೆ 1 ರಿಂದ 38ಕ್ಕೆ ಉತ್ತರಾಭಿಮುಖವಾಗಿ ಸರ್ವೆ ನಂಬರು 13ರ ಪೂರ್ವದ ಗಡಿಯ ಮೇಲೆ 20.00 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 38 ರಿಂದ 37ಕ್ಕೆ ಉತ್ತರ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಸರ್ವೆ ನಂಬರು 13ರ ಪೂರ್ವದ ಗಡಿಯ ಮೇಲೆ 3.50 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನ ಸಂಖ್ಯೆ 37 ರಿಂದ 36ಕ್ಕೆ ಉತ್ತರ ಮತ್ತು ವಾಯುವ್ಯ ದಿಕ್ಕುಗಳ ನಡುವೆ ಸರ್ವೆ ನಂಬರು 13ರ ಪೂರ್ವದ ಗಡಿಯ ಮೇಲೆ 1.50 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 36 ರಿಂದ 35ಕ್ಕೆ ಆಗ್ನೇಯ ಮತ್ತು ಪೂರ್ವ ದಿಕ್ಕುಗಳ ನಡುವೆ ಸರ್ವೆ ನಂಬರ್ 26ರ ದಕ್ಷಿಣದ ಗಡಿಯ ಮೇಲೆ ಸಾಗಿ ಮತ್ತು ಅದು ಸರ್ವೆ ನಂಬರು 26 ಮತ್ತು 36ರ ದಕ್ಷಿಣ ಮತು ಆಗ್ನೇಯ ದಿಕ್ಕಿನ ಮೂಲೆಯ ಕೂಡುಬಾಂದುವಿನಲ್ಲಿ ಕೊನೆಗೊಳ್ಳುತ್ತದೆ. ಮುಂದೆ ರೇಖೆಯು ಸ್ಥಾನ ಸಂಖ್ಯೆ 35 ರಿಂದ 34ಕ್ಕೆ ಉತ್ತರ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಸರ್ವೆ ನಂಬರು 26ರ ಪೂರ್ವದ ಗಡಿಯ ಮೇಲೆ 5 ಸರಪಳಿ ದೂರ ಚಲಿಸುತ್ತದೆ ಮತು ಅದು ಸರ್ವೆ ನಂಬರು 25.26 ಮತ್ತು 36ರ ಕೂಡುಬಾಂದುವಿನಲ್ಲಿ ಕೊನೆಗೊಳ್ಳುತ್ತದೆ. ರೇಖೆಯು ಸ್ಥಾನ ಸಂಖ್ಯೆ 34 ರಿಂದ 33ಕ್ಕೆ ಉತ್ತರ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಸರ್ವೆ ನಂಬರು 25ರ ಆಗ್ನೇಯ ದಿಕ್ಕಿನ ಗಡಿಯ ಮೇಲೆ 1 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 33 ರಿಂದ 32ಕ್ಕೆ ಉತ್ತರಾಭಿಮುಖವಾಗಿ ಸರ್ವೆ ನಂಬರು 25ರ ದಕ್ಷಿಣದ ಗಡಿಯ ಮೇಲೆ 1.25 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನಸಂಖ್ಯೆ 32ರಿಂದ ಸರ್ವೆನಂಬರು 36ರಲ್ಲಿ ಹಲವಾರು ದಿಕ್ಕುಗಳಲ್ಲಿ ಸ್ಥಾನಗಳ ಬಿಂದುಗಳಾದ 31.30ಎ 30 29, 28ಬಿ, 28ಎ, 28, 27, 26 ಮತ್ತು 25ರ ಮೂಲಕ ಹಾದು ಮತ್ತು ಸರ್ವೆ ನಂಬರು 31 ಮತ್ತು 36ರ ಬಾಂದುವಿನಲ್ಲಿ ಸ್ಥಿರವಾಗಿರುವ ಸ್ಥಾನಸಂಖ್ಯೆ 24ನ್ನು 67.25 ಸರಪಳಿ ದೂರದಲ್ಲಿ ಮುಟ್ಟುತ್ತದೆ.

ರೇಖೆಯು ಸ್ಥಾನಸಂಖ್ಯೆ 24ರಿಂದ 23ಕ್ಕೆ ಉತ್ತರಾಭಿಮುಖವಾಗಿ ಸರ್ವೆ ನಂಬರು 31ರ ಪೂರ್ವದ ಗಡಿಯ ಮೇಲೆ 1.50 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 23 ರಿಂದ 22ಕ್ಕೆ ಪೂರ್ವಾಭಿಮುಖವಾಗಿ ಸರ್ವೆ ನಂಬರು 31ರ ಪೂರ್ವ ಮತ್ತು ದಕ್ಷಿಣದ ಬಾಂದಿನ ಕಡೆಗೆ 3 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 22ರಿಂದ 21ಕ್ಕೆ ಉತ್ತರಾಭಿಮುಖವಾಗಿ ಸರ್ವೆನಂಬರು 32ರ ಪೂರ್ವದ ಬಾಂದಿನ ಕಡೆಗೆ 5.00 ಸರಪಳಿ ದೂರಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 21ರಿಂದ 20ಕ್ಕೆ ಪುರ್ವಾಭಿಮುಖವಾಗಿ ಸರ್ವೆನಂಬರು 33ರ ದಕ್ಷಿಣದ ಗಡಿಯ ಮೇಲೆ 4.20 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನಸಂಖ್ಯೆ 20 ರಿಂದ 19ಕ್ಕೆ ಉತ್ತರ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಸರ್ವೆ ನಂಬರು 33ರ ಪೂರ್ವದ ಗಡಿಯ ಮೇಲೆ ಮೂಲಕ 5.50 ಸರಪಳಿ ದೂರ ಚಲಿಸುತ್ತದೆ. ಮುಂದೆ ರೇಖೆಯು ಸ್ಥಾನಸಂಖ್ಯೆ 19 ರಿಂದ 18ಕ್ಕೆ ಪೂರ್ವಾಭಿಮುಖವಾಗಿ ಸರ್ವೆ ನಂಬರ್ 36ರಲ್ಲಿ 19 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನ ಸಂಖ್ಯೆ 18 ರಿಂದ 17 ಎಗೆ ಸರ್ವೆ ನಂಬರು 36ರಲ್ಲಿ ಉತ್ತರಾಭಿಮುಖವಾಗಿ 11 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 17ಎ ರಿಂದ 17ಕ್ಕೆ ಈಶಾನ್ಯ ದಿಕ್ಕಿನ ಕಡೆಗೆ ಸರ್ವೆನಂಬರು 28ರಲ್ಲಿ ಪೂರ್ವದ ಗಡಿಯ ಮೇಲೆ 6.25 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 17 ರಿಂದ 16ಕ್ಕೆ ಸರ್ವೆನಂಬರು 36ರಲ್ಲಿ ದಕ್ಷಿಣಾಭಿಮುಖವಾಗಿ 6.50 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ 16ರಿಂದ 15ಬಿ ಉತ್ತರ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಸರ್ವೆ ನಂಬರು 36ರಲ್ಲಿ 7.00 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಸ್ಥಾನಸಂಖ್ಯೆ 15ಬಿ ಯಿಂದ ಸರ್ವೆ ನಂಬರು 36ರಲ್ಲಿ ಉತ್ತರಾಭಿಮುಖವಾಗಿ 6.00 ಸರಪಳಿ ದೂರ ಚಲಿಸಿ ಮತ್ತು ಅದು ಪ್ರಾರಂಭದ ಬಿಂದುವಾದ 15ಎ ಗೆ ಮುಟ್ಟುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ಬೇರಿಂಗ್ ಮತ್ತು ದೂರ ಈ ಕೆಳಗಿನಂತಿದೆ:

| ಸ್ಥಾನದಿಂದ | ಸ್ಥಾನಕ್ಕೆ | ಫೋರ್ ಬೇರಿಂಗ್ | ಸರಪಳಿ ದೂರ |
|---|---|---|---|
| 1 | 38 | 9.00 | 20.00 |
| 38 | 37 | 18.00 | 3.50 |
| 37 | 36 | 354.00 | 1.50 |
| 36 | 35 | 109.00 | 3.50 |
| 35 | 34 | 18.00 | 5.00 |
| 34 | 33 | 35.00 | 1.00 |
| 33 | 32 | 6.00 | 1.25 |
| 32 | 31 | 113.00 | 8.50 |
| 31 | 30ಎ | 10.00 | 8.00 |
| 30 | 29 | 3.50 | 8.00 |
| 29 | 28ಬಿ | 90.00 | 3.25 |
| 28ಬಿ | 28ಎ | 360.00 | 4.50 |
| 28ಎ | 28 | 90.00 | 3.25 |
| 28 | 27 | 347.00 | 6.50 |
| 27 | 26 | 90.00 | 5.00 |
| 26 | 25 | 186.00 | 5.00 |
| 25 | 24 | 280.00 | 8.25 |
| 24 | 23 | 6.00 | 1.50 |
| 23 | 22 | 93.00 | 3.00 |
| 22 | 21 | 9.00 | 5.00 |
| 21 | 20 | 86.00 | 4.20 |
| 20 | 19 | 12.00 | 5.50 |
| 19 | 18 | 30.00 | 19.00 |
| 18 | 17ಎ | 360.00 | 11.00 |
| 17ಎ | 17 | 44.00 | 6.25 |
| 17 | 16 | 178.00 | 6.50 |
| 16 | 15ಬಿ | 72.00 | 7.00 |
| 15ಬಿ | 15ಎ | 352.00 | 6.00 |

**ಆವರಣ:–** 1: ಇದು 15.08 ಎಕರೆ ವಿಸ್ತೀರ್ಣವಿರುತ್ತದೆ. ಇದು ಸರ್ವೆ ನಂಬರು 36ರ ದಕ್ಷಿಣ ದಿಕ್ಕಿನ ನಟ್ಟಕಲ್ ಹಟ್ಟಿ ಗಡಿ ರೇಖೆಯ ಹತ್ತಿರವಿರುತ್ತದೆ. ಪ್ರಾರಂಭದ ಸ್ಥಾನಸಂಖ್ಯೆ 'ಡಿ'ಯು ಸರ್ವೆ ನಂಬರು 36ರ ಕೂಡುಬಾಂದುವಿನಿಂದ ನೆಟ್ಟಕಲ್ ಹಟ್ಟಿ ಗಡಿರೇಖೆಯ ಮೇಲೆ 1.50 ಸರಪಳಿ ದೂರದಲ್ಲಿ ಉತ್ತರ ದಿಕ್ಕಿನ ಕಡೆಗೆ ಸ್ಥಿರವಾಗಿದೆ ರೇಖೆಯು ಸ್ಥಾನಸಂಖ್ಯೆ 'ಡಿ' ನಿಂದ 'ಬಿ'ಗೆ ಸರ್ವೆ ನಂಬರು 36ರಲ್ಲಿ ವಾಯುವ್ಯ ದಿಕ್ಕಿನ ಕಡೆಗೆ 16 ಸರಪಳಿ ದೂರ ಚಲಿಸುತ್ತದೆ. ಪುನಃ ರೇಖೆಯು ಬಿಂದು ಎ ನಿಂದ ಬಿಗೆ ಸರ್ವೆ ನಂಬರು ಉತ್ತರಾಭಿಮುಖವಾಗಿ 9.50 ಸರಪಳಿ ಚಲಿಸುತ್ತದೆ. ಪುನಃ ರೇಖೆಯು ಸ್ಥಾನಸಂಖ್ಯೆ ಬಿ ನಿಂದ ಸಿಗೆ ಸರ್ವೆ ನಂಬರು 36ರಲ್ಲಿ ಆಗ್ನೇಯ ದಿಕ್ಕಿನ ಕಡೆಗೆ 16 ಸರಪಳಿ ದೂರ ಚಲಿಸುತ್ತದೆ. ನಂತರ ರೇಖೆಯು ಬಿಂದು 'ಸಿ' ನಿಂದ ಸರ್ವೆ ನಂಬರು 36ರಲ್ಲಿ ದಕ್ಷಿಣಾಭಿಮುಖವಾಗಿ ಸಾಗಿ ಮತ್ತು ಅದು ಪ್ರಾರಂಭದ ಬಿಂದು 'ಡಿ' ಯನ್ನು ಅದು 9.50 ಸರಪಳಿ ದೂರದಲ್ಲಿ ಮುಟ್ಟುತ್ತದೆ.

**ದಾರಿಯ ಹಕ್ಕುಗಳು**

–ಇಲ್ಲಾ–

ಇತರೆ ಸವಲತ್ತುಗಳು

1) ಉಚಿತವಾಗಿ ಗ್ರಾಮಸ್ಥರು ತಮ್ಮ ಜಾನುವಾರುಗಳಿಗೆ ಹುಲ್ಲು ಮೇಯಿಸಬಹುದಾಗಿದೆ.

2) ಉಚಿತವಾಗಿ ಗ್ರಾಮಸ್ಥರು ಹಸಿರು ಎಲೆಗೊಬ್ಬರವನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.

3) ಉಚಿತವಾಗಿ ಗ್ರಾಮಸ್ಥರು ಒಣ ಉರುವಲು ಸೌದೆಗಳನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.

4) ಉಚಿತವಾಗಿ ಗ್ರಾಮಸ್ಥರು ಮುಳೇ ಹುಲ್ಲನ್ನು ನಂಬಿಕೆ ಅರ್ಹ ಉದ್ದೇಶಕ್ಕಾಗಿ ಆಯ್ದುಕೊಳ್ಳಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ ಜಯಲಕ್ಷ್ಮಿ**

ಪಿ.ಆರ್. 303

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಸಿಆಸುಇ 45 ಸಿಎವಿ 2009, ಬೆಂಗಳೂರು, ದಿನಾಂಕ:21ನೇ ಮೇ 2009**

ರಾಜ್ಯ ಮಾಹಿತಿ ಆಯುಕ್ತರು, ಕರ್ನಾಟಕ ಮಾಹಿತಿ ಆಯೋಗ, ಇವರ ಸಂಖ್ಯೆ:ಕಮಾಆ 2263 ದೂರು 2008ರ ಸಂಬಂಧದಲ್ಲಿ ದಿನಾಂಕ:22.4.2009ರ ಆದೇಶದನ್ವಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಮಾಹಿತಿ ಹಕ್ಕು ಕಾಯಿದೆ 2005ರಡಿ ಮಾಹಿತಿ ಕೋರಿ ಹೆಚ್ಚು ಅರ್ಜಿಗಳು ಬರುತ್ತಿರುವುದರಿಂದ ಹಾಗೂ ಇಲಾಖೆಯಲ್ಲಿ 20ಕ್ಕೂ ಹೆಚ್ಚು ಸಾರ್ವಜನಿಕ ಮಾಹಿತಿ ಅಧಿಕಾರಿಗಳಿರುವುದರಿಂದ ಇಲಾಖೆಯ ಕಾರ್ಯದರ್ಶಿಗಳ ಹಾಗೂ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ವಿಳಾಸಕ್ಕೆ ಬಂದಂತಹ ಅರ್ಜಿಗಳನ್ನು ತುರ್ತಾಗಿ ವಿಲೇವಾರಿ ಮಾಡಲು ಅನುಕೂಲವಾಗುವಂತೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು ಇಲಾಖೆ(ರಾಜಕೀಯ) , ಕೊಠಡಿ ಸಂಖ್ಯೆ:360–ಬಿ, ವಿಧಾನಸೌಧ, ಇವರನ್ನು ಸಾರ್ವಜನಿಕ ಸಮನ್ವಯ ಅಧಿಕಾರಿ ಎಂದು ಈ ಕೂಡಲೇ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಮಾಹಿತಿ ಹಕ್ಕು ಕಾಯ್ದೆಯನ್ವಯ ಸಾರ್ವಜನಿಕ ಸಮನ್ವಯ ಅಧಿಕಾರಿಯವರು ಸಿಬ್ಬಂದಿ ಮತ್ತು ಆಡಳಿತ ಸುಧಾರನೆ ಇಲಾಖೆಯ ಕಾರ್ಯದರ್ಶಿಯವರ ಆಡಳಿತ ವಿಭಾಗಕ್ಕೆ ಬರುವ ಸೇವೆಗಳು, ಸೇವಾ ನಿಯಮಗಳು, ಶಿಷ್ಠಾಚಾರ, ಕಾರ್ಯಕಾರಿ ಹಾಗೂ ಆಡಳಿತ ವಿಭಾಗಕ್ಕೆ ಸಂಬಂಧಪಟ್ಟಂತೆ ಮಾಹಿತಿ ಹಕ್ಕು ಕಾಯ್ದೆ ಅಡಿ ಅರ್ಜಿಗಳನ್ನು ಸ್ವೀಕರಿಸಿ:

1) 3 ದಿನಗಳೊಳಗಾಗಿ ಸಂಬಂಧಪಟ್ಟ ಸಾರ್ವಜನಿಕ ಮಾಹಿತಿ ಅಧಿಕಾರಿಗಳಿಗೆ (PIO) ನೀಡುವುದು.

2) ಸಂಬಂಧಪಟ್ಟ ಸಾರ್ವಜನಿಕ ಮಾಹಿತಿ ಅಧಿಕಾರಿ (PIO) ಗಳು ನಿಗದಿತ ಅವಧಿಯೊಳಗೆ ಅರ್ಜಿಯನ್ನು ವಿಲೇವಾರಿ ಮಾಡಿ ವರದಿಯನ್ನು ಸಮನ್ವಯ ಅಧಿಕಾರಿಗೆ ನೀಡಲು ಹಾಗೂ ಸಮನ್ವಯ ಅಧಿಕಾರಿಗಳು ಪ್ರತಿ ತಿಂಗಳು ಸ್ವೀಕೃತಿ ಮತ್ತು ವಿಲೇವಾರಿಯಾದ ಅರ್ಜಿಗಳ ವರದಿಯನ್ನು ಹಾಗೂ ಬೇರೆ ಇಲಾಖೆಗೆ ವರ್ಗಾಯಿಸಲ್ಪಟ್ಟ ಅರ್ಜಿಗಳು ಮತ್ತು ತಿರಸ್ಕೃತಗೊಂಡ ಅರ್ಜಿಗಳ ವಿವರವನ್ನು ಸರ್ಕಾರದ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ ಇವರಿಗೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಮೂರ್ತಿ**

ಪಿ.ಆರ್. 316

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸಿಬ್ಬಂದಿ)